ಮೂರುಸಾವಿರಮಠದ
ಕರ್ತೃ ಶ್ರೀಜಗದ್ಗುರು

# ಗುರುಸಿದ್ಧೇಶ್ವರ ಲೀಲಾಮೃತ



ಲೇಖಕರು :
ಶ್ರೀ ಬಸವಕುಮಾರಶಾಸ್ತ್ರಿಗಳು ಕುಂದರ್ಗಿಮಠ, ಧಾರವಾಡ.



ಪ್ರಕಾಶಕರು :
ಶ್ರೀಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲ,
ಮೂರುಸಾವಿರಮಠ, ಹುಬ್ಬಳ್ಳಿ.

೧೯೭೮

ಮೂರುಸಾವಿರಮಠದ ಕರ್ತೃ ಶ್ರೀಜಗದ್ಗುರು

# ಗುರುಸಿದ್ಧೇಶ್ವರ ಲೀಲಾಮೃತ



ಲೇಖಕರು :
ಶ್ರೀ ಬಸವಕುಮಾರಶಾಸ್ತ್ರಿಗಳು ಕುಂದರ್ಪಿಮಠ, ಧಾರವಾಡ



ಪ್ರಕಾಶಕರು :
ಶ್ರೀಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲ
ಮೂರುಸಾವಿರಮಠ, ಹುಬ್ಬಳ್ಳಿ



೧೯೭೮

...ನ್ನ ಪ್ರೀತಿ...
...ಮ್ಯವಿಲ್ಲದೆ, ಸರ್ವಧರ್ಮ
...ಸಾದರಗಳನ್ನು ನೀಡುವದು ಈ
...ಮೂಲ ಕರ್ತೃಗದ್ದುಗೆಯ ಮಹ
...ದೆ. ಭಕ್ತರಿಗೆ ಮುಕ್ತಿಯನ್ನು ಕೊಡುತ್ತ
...ರು ಮೂಲಕರ್ತೃಗಳು ಅದ್ಭುತ ಪ್ರಭಾವ

ಮೊದನೆಯು ಆವೃತ್ತಿ ೧೦೦೦ ಪ್ರತಿಗಳು ೧೯೭೬
ಎರಡನೆಯು ಆವೃತ್ತಿ ೧೦೦೦ ಪ್ರತಿಗಳು ೧೯೭೮

ಪ್ರಕಾಶಕರು :
ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳಿ
ಮೂರುಸಾವಿರಮಠ ಹುಬ್ಬಳ್ಳಿ.

ಮುದ್ರಕರು :
ನ ಪ್ರಿಟಿಂಗ್ ಪ್ರೆಸ್,
ರಮಠ, ಹುಬ್ಬಳ್ಳಿ.

## ಶ್ರೀಮನ್ಮಹಾರಾಜ, ನಿರಂಜನ ಜಗದ್ಗುರು
## ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
## ಮೂರುಸಾವಿರಮಠ ಹುಬ್ಬಳ್ಳಿ

# ಅವರ ಆಶೀರ್ವಚನ

ಹುಬ್ಬಳ್ಳಿಯ ಶ್ರೀಜಗದ್ಗುರು ಮೂರುಸಾವಿರಮಠವು ಇದೊಂದು ಜಾಗೃತ ಪೀಠ. ಆಧ್ಯಾತ್ಮ ಸಾಧಕರ ಜೀವನವನ್ನು ಬೆಳಗಿಸುವ ನಂದಾದೀಪ. ವಿಶ್ವಕಲ್ಯಾಣಕ್ಕೆ ತನ್ನ ಬಾಳನ್ನು ಮೀಸಲಾಗಿರಿಸಿ, ಶೈಕ್ಷಣಿಕ ಕ್ಷೇತ್ರಗಳಲ್ಲಿಯೂ ಅಸಾಧಾರಣವಾದ ಕಾರ್ಯವೆಸಗಿ ಧರ್ಮದ ಬಾವುಟವನ್ನು ಎತ್ತಿ ಹಿಡಿದ ಆದರ್ಶ ಮಹಾಮಠವಾಗಿದೆ. ಈ ಪೀಠದ ಕರ್ತೃಗದ್ದುಗೆಯು ಸರ್ವ ಜನರ ಭಕ್ತಿಗೆ ಆಗರವಾಗಿರುವದಲ್ಲದೆ ಇಷ್ಟಾರ್ಥಸಿದ್ಧಿ ಪ್ರದಾಯಕವಾಗಿರುವದು. ಮೂಲ ಕರ್ತೃವಿನ ಐತಿಹಾಸಿಕ ಹಿನ್ನೆಲೆ ಬಹು ಪ್ರಾಚೀನವಾದುದು. ೧೨ ನೆಯ ಶತಮಾನದಲ್ಲಿಯೂ ಮೂರುಸಾವಿರಮಠವು ಧಾರ್ಮಿಕ ಕೇಂದ್ರವಾಗಿದ್ದ ವಿಷಯ ಶಿರಸಿ ಶಾಸನದ ಆಧಾರದಿಂದ ಸಂಶೋಧಕರು ಸಂಶೋಧಿಸಿದ್ದಾರೆ.

"ಈ ಕರ್ತೃ ಗದ್ದುಗೆಯ ಸಮಾಧಿ ಮಂಟಪವು ಬಹಳ ಬಂಧುರವಾಗಿಯೂ, ಸರ್ವಾಂಗ ಸುಂದರವಾಗಿಯೂ ಅಲಂಕೃತವಾಗಿದ್ದರೂ. ಭಾವುಕರ ದೃಷ್ಟಿಗೆ ಅದು ಹುಬ್ಬಳ್ಳಿಯ ಹೃದಯವೆನಿಸಿ, ಸಜೀವವಾಗಿರುವಂತೆ ಸತ್ವಪೂರ್ಣವಾಗಿರುವಂತೆ ಎದ್ದು ತೋರುತ್ತಿದೆ. ಹಾಗು ಶ್ರೀಮಠದ ಮುಖ್ಯ ಭಾಗವಾಗಿ ಅಂತಃಶಕ್ತಿಯಂತೆ, ಅವ್ಯಕ್ತ ಮುಕ್ತಿಯಂತೆ ಅಂತರ್ಗವಾಗಿದೆ." ಎಂದೆನ್ನುವ ಅನುಭವಿಕರ ಹಾಗು ಸಾಹಿತಿಗಳ ಈ ನುಡಿಯು ನಿಜಕ್ಕೂ ಸತ್ಯವಾದದು. ನಂಬಿದ ಸದ್ಭಕ್ತರಿಗೆ ಉತ್ತರೋತ್ತರ ಕಲ್ಯಾಣವನ್ನು ಕರುಣಿಸಿ ಮೇಲಕ್ಕೆತ್ತಿ ಕಾಪಾಡುತ್ತಿದೆ. ಭಕ್ತರ ಮನೋಬಯಕೆಗಳನ್ನು ಪೂರ್ತಿಗೊಳಿಸುತ್ತದೆ. ಜಾತಿ.ಮತ ಪಕ್ಷಪಂಗಡಗಳ ತಾರತಮ್ಯವಿಲ್ಲದೆ, ಸರ್ವಧರ್ಮದವರೂ ಸಹ, ಈ ಕರ್ತೃಗದ್ದುಗೆಗೆ ಗೌರವಾದರಗಳನ್ನು ನೀಡುವದು ಈ ಪೀಠದ ಮತ್ತೊಂದು ವೈಶಿಷ್ಟ್ಯವಾಗಿದೆ. ಮೂಲ ಕರ್ತೃಗದ್ದುಗೆಯ ಮಹತಿಯು ದಿನೇದಿನೇ ಬೆಳೆಯುತ್ತ ನಡೆದಿದೆ. ಭಕ್ತರಿಗೆ ಮುಕ್ತಿಯನ್ನು ಕೊಡುತ್ತಲಿದೆ. ನಿರ್ವಿಕಲ್ಪ ಸಮಾಧಿಸ್ಥರಾಗಿರು ಮೂಲಕರ್ತೃಗಳು ಅದ್ಭುತ ಪ್ರಭಾವ

ವನ್ನು ಸಮಾಜದಲ್ಲಿ ಬೀರಿ, ಜನರುದ್ಧಾರ ಮಾಡಿ ನವಚೈತನ್ಯವನ್ನುಂಟು ಮಾಡಿದ ಪರಮತಪಸ್ವಿಗಳು ಈ ಮಹಾಶಿವಯೋಗಿಗಳ ೧೨ನೆಯ ಶತಮಾನ ದಿಂದಲೂ ಜನಜಾಗೃತಿ ಮಾಡುತ್ತ, ಅವ್ಯಕ್ತ ಶಕ್ತಿಯಾಗಿ ಇಂದಿಗೂ ಭಕ್ತರ ಚಿಂತಾಮಣಿಯಾಗಿ ರಾರಾಜಿಸುತ್ತಿದ್ದಾರೆ! ಮೂಲ ಕರ್ತೃಗಳ ಹೆಸರು ಗುರು ಸಿದ್ಧೇಶನೆಂದೂ, ಹುಚ್ಚೇಶನೆಂದು ಕರೆಯುವ ವಾಡಿಕೆಯಾಗಿದೆ. ಇವರು ಎಲ್ಲಿಂದ ಬಂದರು? ಯಾವ ಊರು? ಎಂಬುದು ಇನ್ನೂ ತಿಳಿದು ಬಂದಿಲ್ಲ. ಅದರ ಬಗ್ಗೆ ಸಂಶೋಧನೆ ನಡೆದಿದೆ. ಮೂರುಸಾವಿರಮಠದ ಪ್ರಾಚೀನ ಇತಿ ಹಾಸದ ಬಗ್ಗೆಯೂ ಇನ್ನೂ ಸಂಶೋಧನೆ ಮಾಡಿಸಬೇಕಾಗಿದೆ.

ಒಟ್ಟಿನಲ್ಲಿ ಮೂಲ ಕರ್ತೃವಿನ ದೇವಾಲಯದ ಗರ್ಭಗುಡಿ ದಿವ್ಯಶಕ್ತಿ ಯನ್ನು ಕೊಡುವ ಅದ್ಭುತ ಶಕ್ತಿಯ ಕೇಂದ್ರವೆಂದರೆ ತಪ್ಪಾಗಲಿಕ್ಕಿಲ್ಲ. ಜ್ಞಾನ ಕ್ರಿಯಾಸಮನ್ವಯದ ಪುಣ್ಯ ಕ್ಷೇತ್ರವಾಗಿದೆ.

ಶರಣ ಸಂಸ್ಕೃತಿಯ ಅಮೃತ ಕಿರಣವನ್ನು ಸುತ್ತೆಲ್ಲ ಪ್ರಕಾಶಿಸಿದ ಮಹಾಯೋಗಿಪುಂಗವರಾದ ಶ್ರೀ ಕರ್ತೃ ಜಗದ್ಗುರು ಗುರುಸಿದ್ಧೇಶ್ವರರ ಚರಿ ತ್ರೆಯನ್ನು ಬರೆಯಿಸಬೇಕೆಂದು ಬಹುದಿನದ ಆಶೆ ನಮ್ಮಲ್ಲಿ ಮೊಳಕೆಯೊಡೆ ದಿತ್ತು. ಆ ನಮ್ಮ ಆಶೆಯನ್ನು ಕೀರ್ತನ ಕಲಾಕೋವಿದರೂ, ಭಕ್ತಿಸಂಪ ನ್ನರೂ, ಹೃದಯವಂತಿಕೆಯುಳ್ಳವರೂ ಆದ ಶ್ರೀ ಪಂಡಿತ ಬಸವಕುಮಾರ ಶಾಸ್ತ್ರಿಗಳು ಧಾರವಾಡ ಅವರು ಪೂರೈಸಿದ್ದು ನಮಗೆ ಅತೀವ ಆನಂದವಾಗಿದೆ. ಅವರ ಭಕ್ತಿಯ ಪ್ರವಾಹವೇ ಈ ಲೀಲಾಮೃತದಲ್ಲಿ ಹರಿದು ಬಂದಿದೆ. ಗುರು ಸಿದ್ಧೇಶ್ವರನ ಅದ್ಭುತಮಹಿಮೆಯನ್ನು, ಅವರ ಪವಾಡಗಳನ್ನು, ಹಲವು ಪಂಡಿತರಿಂದ, ಸಂಶೋಧಕರಿಂದ, ಅನುಭವಿಕರಾದ ವಯೋವೃದ್ಧರಿಂದ ತಿಳಿದು ಸಂಗ್ರಹಿಸಿ ಬರೆದಿದ್ದಾರೆ. ಈ ಕಾರ್ಯವೂ ನಿಜಕ್ಕೂ ಸ್ತುತ್ಯಾರ್ಹ ವಾದುದು. ಗುರುಸಿದ್ಧೇಶ್ವರ ಚರಿತ್ರೆಯು ಪುಸ್ತಕರೂಪದಲ್ಲಿ ಇರದೆ ಹಾಗೆಯೇ ಜನರ ಮುಖದಿಂದ ಕೇಳಿ ಬರುತ್ತಿತ್ತು. ಆದರೆ ಇಂದು ಪುಸ್ತಕ ರೂಪದಲ್ಲಿ ನಾಡಿಗೆ ನೀಡಿ, ತಮ್ಮ ಸೇವೆಯನ್ನು ಅಂತಃಕರಣಪೂರ್ವಕ ಮಾಡಿ, ಕೃತಾರ್ಥರಾಗಿದ್ದಾರೆ. ಪಂ. ಬಸವಕುಮಾರ ಶಾಸ್ತ್ರಿಗಳು ಈ ಪುಸ್ತ ಕವನ್ನು ಬರೆಯುವಾಗ, ಇದು ನನ್ನ ಮೊದಲನೆಯ ಪುಸ್ತಕ ತಪ್ಪುಗಳಿದ್ದಲ್ಲಿ

ತಿಳಿಸಿದರೆ ಮುಂದಿನ ಆವೃತ್ತಿಯಲ್ಲಿ ಸುಧಾರಿಸಿಕೊಳ್ಳಬಹುದು ಎಂದು ತಿಳಿಸಿದ್ದಾರೆ. ಅವರ ಉದಾತ್ತಮನೋಭಾವನೆ ಇಲ್ಲಿ ಸಂಸ್ಮರಿಸಬಹುದು ಎಂದುತಿಳಿಸಿದ್ದಾರೆ. ಪಂ. ಬಸವಕುಮಾರ ಶಾಸ್ತ್ರಿಗಳ ಮಾತೃಭಾಷೆ ತಮಿಳು ಆದರೆ ಅವರು ಕನ್ನಡ ಕಲಿತು, ಕನ್ನಡ ಭಾಷೆಯಲ್ಲಿಯೇ ಕೀರ್ತನ ಹೇಳಿ, ಹತ್ತಾರುಸಾವಿರ ಜನರನ್ನು ಬೆರಗುಗೊಳಿಸಿದ್ದಾರೆ. ಅವರ ಸಾಹಸಮಯ ಜೀವನವನ್ನು ಮೆಚ್ಚತಕ್ಕದ್ದು. ಕೀರ್ತನಕಾರರಾಗಬೇಕೆನ್ನುವರು. ಇವರು ಪಡುವ ಸಾಹಸವನ್ನು ಅಧ್ಯಯನಪ್ರಿಯತೆಯನ್ನು ನೋಡಿ ಕಲಿತಕೊಳ್ಳಬೇಕು. ಅವರು ಸಾಹಸಿಗರಿದ್ದಷ್ಟೇ ಭಾವಜೀವಿಗಳಾಗಿದ್ದಾರೆ. ನಿತ್ಯ ಪೂಜೆ, ಮುಂತಾದವುಗಳನ್ನು ಮಾಡುತ್ತಿದ್ದಾರೆ. ಇವು ಕೀರ್ತನಕಾರರಿಗೆ ಬೇಕಾದವುಗಳು. ಇವುಗಳಿಲ್ಲದೆ ಕೀರ್ತನಶಕ್ತಿ ಬೆಳೆಯದು. ಬೆಳಗದು. ಕೀರ್ತನದಿಂದ ಸುಲಭವಾಗಿ, ಸಹಜವಾಗಿ ಆಗುವಷ್ಟು ಧರ್ಮಜಾಗೃತಿ, ಸಂಸ್ಕೃತಿ ಪ್ರಚಾರ ಮತ್ತಾವದರಿಂದಲೂ ಆಗಲಿಕ್ಕಿಲ್ಲ. ಅಜ್ಞರನ್ನು ಸುಜ್ಞರನ್ನಾಗಿ ಮಾಡುತ್ತದೆ ಕೀರ್ತನೆ ಕಲೆ ಹಳ್ಳಿಗರಿಗೆ ಒಳ್ಳೇ ದಾರಿಯನ್ನು ನೀಡುತ್ತದೆ ಕೀರ್ತನಕಲೆ. ಮಲಗಿದವರನ್ನು ಎಚ್ಚರಿಸುತ್ತದೆ ಕೀರ್ತನಕಲೆ ಅಮೃತದ ರಸಪಾಕವಿದ್ದಂತೆ ಜನತೆಗೆ ಬಾಳೆಹಣ್ಣಿನ ಸವಿಯಿದ್ದಂತೆ ಇದನ್ನರಿತೇ ಶ್ರೀ ಮೂರುಸಾವಿರಮಠದಲ್ಲಿ ಜಗದ್ಗುರು ಗುರುಸಿದ್ಧೇಶ್ವರ ಕೀರ್ತನ ಮಹಾವಿದ್ಯಾಲಯವನ್ನು ಸ್ಥಾಪಿಸಲಾಗಿದೆ.

ಒಟ್ಟಿನಲ್ಲಿ ಪಂ. ಬಸವಕುಮಾರರು ಈ ಪುಸ್ತಕವನ್ನು ಹಾಗೂ ಸಾಮಾನ್ಯ ಜನತೆಗೆ ಉಪಯೋಗವಾಗುವಂತೆ ಬರೆದಿದ್ದಾರೆ. ಇದಾದರೂ ಅವರ ಮೊದಲು ಪುಸ್ತಕಗಳಲ್ಲಿರುವ ದೋಷಗಳನ್ನು ನೋಡದೆ ವಿಷಯ ಹಾಗು ಅವರು ಪಟ್ಟ ಕಷ್ಟವನ್ನು ನೋಡಿ ನಲಿಯಬೇಕಾಗಿದೆ. ಇನ್ನೂ ಹೆಚ್ಚಾಗಿ ಇವರ ಕೀರ್ತನಕಲೆ ಬೆಳೆಯಲಿ. ಸಾರ್ವಜನಿಕರಿಗೆ ಉಪಯೋಗವಾಗಿ, ಸಂಸ್ಕೃತಿ ಸೌರಭ ಸೂಸಲಿ ಇವರ ಸೇವೆ ನಾಡು ಸದುಪಯೋಗ ಮಾಡಿಕೊಳ್ಳಲಿ. ಇವರಿಂದ ಇನ್ನೂ ಅನೇಕ ಪುಸ್ತಕಗಳು ಹೊರಬಂದು ಜನತೆಗೆ ಸ್ಫೂರ್ತಿಯನ್ನು ನೀಡಲಿ, ನಿರಂತರವೂ ಇವರಿಗೆ ಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ಆಶೀರ್ವಾದವಿರಲೆಂದು ಅಂತಃಕರಣಪೂರ್ವಕ ಹಾರೈಸಿದ್ದೇವೆ.

ಮುಕ್ಕಾಂ, ಹುಬ್ಬಳ್ಳಿ — —ಇತಿಶಿವಂ

# ನಿವೇದನೆ

ಈ ನಮ್ಮ ಭಾರತವು ಅನೇಕ ಮಹಾಪುರುಷರಿಗೆ ಜನ್ಮಭೂಮಿಯಾಗಿದೆ ಹಲವು ಧರ್ಮಗಳಿಗೆ ಆಶ್ರಯವಿತ್ತ ಪುಣ್ಯಭೂಮಿಯಾಗಿದೆ. ಇಲ್ಲಿ ಜಗದ್ವಿಖ್ಯಾತರಾದ ಧರ್ಮಬೋಧಕರು, ತತ್ತ್ವಜ್ಞರು ಅನುಭಾವಿಗಳು ಜನ್ಮವೆತ್ತಿದ್ದಾರೆ- ಸ್ವರಾಷ್ಟ್ರದಲ್ಲಿಲ್ಲದೆ ಪರರಾಷ್ಟ್ರಗಳಲ್ಲೂ ತಮ್ಮ ಪ್ರಭಾವ ಬೀರಿ ವಿಶ್ವವಿಖ್ಯಾತರಾಗಿದ್ದಾರೆ. ಅಲ್ಲದೇ ಒಂದೇ ಸ್ಥಳದಲ್ಲಿ ಕುಳಿತು ತಾನಿರುವ ಸ್ಥಾನವನ್ನೇ ಧರ್ಮಪ್ರಚಾರದ ಕೇಂದ್ರವನ್ನಾಗಿ ಮಾಡಿಕೊಂಡು ಶಾಪಾನುಗ್ರಹ ಶಕ್ತಿಯನ್ನು ಪಡೆದು ಧರ್ಮೋದ್ಧಾರದ ಕಾರ್ಯದಲ್ಲಿ ತೊಡಗಿ ತಮ್ಮ ತಪಃ ಪ್ರಭಾವದಿಂದ ಜಗತ್ತಿನ ಲಕ್ಷ್ಯವನ್ನೇ ತಮ್ಮ ಕಡೆಗೆ ಸೆಳೆದುಕೊಂಡು ಮಾನವ ಕೋಟಿಯನ್ನು ಉದ್ಧಾರ ಮಾಡಿದ ಮಹಾಮಹಿಮರು ಆಗಿ ಹೋಗಿದ್ದಾರೆ. ಇಂಥಹವರಲ್ಲಿ ೧೨ ನೆಯ ಶತಮಾನದ ನಮ್ಮ ಹುಬ್ಬಳ್ಳಿಯ ಮೂರುಸಾವಿರಮಠದ ಮೂಲ ಕರ್ತೃಗಳಾದ ಜಗದ್ಗುರು ಗುರುಸಿದ್ಧೇಶ್ವರರೂ ಒಬ್ಬರು

ಇವರು ವೀರಶೈವ ಧರ್ಮೋದ್ಧಾರಕರು ಮಹಾಮಹಿಮರು. ಇಂಥಹ ಮಹಾಪುರುಷರ ಸತ್‌ಚರಿತ್ರೆಯನ್ನು ನಾಡಿನ ಜನತೆಗೆ ಪರಿಚಯ ಮಾಡಿಕೊಡಲು ಈ ಹೊತ್ತಿಗೆಯು ಪ್ರಯತ್ನಿಸಿದೆ, ಜಗತ್ತನ್ನೇ ಬೆಳಗಿದ ಪರಂಜ್ಯೋತಿ ಸ್ವರೂಪರಾದ ಕರ್ತೃ ಜಗದ್ಗುರು ಗುರುಸಿದ್ಧೇಶ್ವರರ ಪರಿಚಯ ಮಾಡಿಕೊಡುವುದೆಂದರೆ:—

**ಭಾವಿಸಲು ಭಾಸ್ಕರನ ಬಟ್ಟೆಗೆ ದೀವಿಗೆಯು ಹಂಗೇಕೆ ?**

ಎಂದು ಅಲ್ಲಮಪ್ರಭುದೇವರು ಅಪ್ಪಣೆ ಕೊಡಿಸಿದಂತಾಗುತ್ತದೆ. ಆದರೂ ಒಂದು ಕಾರಣದಿಂದ ಈ ಹೊತ್ತಿಗೆಯನ್ನು ಬರೆಯಬೇಕಾದ ಅನಿವಾರ್ಯ ಪ್ರಸಂಗ ಬಂದಿದ್ದರಿಂದ ಕರ್ತೃ ಶ್ರೀ ಗುರುಸಿದ್ಧೇಶ್ವರರ ಪ್ರೇರಣೆಯೆಂದು ತಿಳಿದು ಬರೆದದ್ದಾಗಿದೆ.

ನಾನು ಲೇಖಕನೂ ಅಲ್ಲ ಸಾಹಿತಿಯೂ ಅಲ್ಲ ಈ ಹೊತ್ತಿಗೆಗೆ ಮೊದಲು ನಾನು ಯಾವಗ್ರಂಥವನ್ನೂ ಬರೆದಿಲ್ಲ. ಇದೇ ನನ್ನ ಚೊಚ್ಚಲು ಕಾಣಿಕೆ

ಯಾಗಿದೆ. ನಾನೋರ್ವ ಸಾಮಾನ್ಯ ಕೀರ್ತನಕಾರ, ಕೀರ್ತನಕಲೆಯೇ ನನ್ನ ಮುಖ್ಯ ಉದ್ಯೋಗವಾಗಿದೆ. ಹುಬ್ಬಳ್ಳಿಯ ಜಗದ್ಗುರು ಮಹಾಸನ್ನಿಧಿಯವರ, ಕೃಪಾಶೀರ್ವಾದದಿಂದ, ಹುಬ್ಬಳ್ಳಿಯ ಮೂರುಸಾವಿರಮಠದಲ್ಲಿ ೧೯೭೭ನೇ ಇಸ್ವಿ ಶ್ರಾವಣ ಮಾಸದಲ್ಲಿ ಒಂದು ತಿಂಗಳು ಕಾಲ ಕೀರ್ತನೆ ಸೇವೆ ಸಲ್ಲಿಸುವ ಸುಯೋಗ ನನಗೆ ದೊರಕಿತು. ಆಗ ಕೆಲವು ಪೀಠದ ಅಭಿಮಾನಿಗಳ ಭಕ್ತರುಗಳು ನನ್ನಲ್ಲಿಗೆ ಬಂದು, ಕರ್ತೃ ಶ್ರೀ ಮಜ್ಜಗದ್ಗುರು ಗುರುಸಿದ್ಧೇಶ್ವರರ ಕೀರ್ತನೆ ಹೇಳಿರಿ ಎಂದು ಒಂದು ಒತ್ತಾಯ ಮಾಡಿದರು. ನನಗೆ ಕರ್ತೃ ಗುರುಸಿದ್ಧೇಶ್ವರರ ಬಗ್ಗೆ ಸರಿಯಾದ ಚರಿತ್ರೆ ಗೊತ್ತಿಲ್ಲ ಮತ್ತೊಮ್ಮೆ ನೋಡೋಣವೆಂದೆ, ಆದರೆ ಈಗಲೇ ಈ ಶ್ರಾವಣಮಾಸ ಮುಗಿಯುವುದರೊಳಗೆ ಮಾಡಲೇಬೇಕೆಂದು ಬಹಳವಾಗಿ ಒತ್ತಾಯ ಮಾಡಿದರು. ಹಾಗೂ ಜಗದ್ಗುರು ಮಹಾಸನ್ನಿಧಿಯವರಲ್ಲಿಯೂ ಸಹ ಈ ವಿಷಯವಾಗಿ ಅವರೆಲ್ಲಾ ಅರಿಕೆ ಮಾಡಿಕೊಂಡರು ಆಗ ಜಗದ್ಗುರು ಮಹಾಸನ್ನಿಧಿಯವರು ನನ್ನನ್ನು ಕರೆದು, ಜನರ ಅಪೇಕ್ಷೆ ಬಹಳವಾಗಿದೆ, ಆದ್ದರಿಂದ ನೀವು ಕರ್ತೃ ಜಗದ್ಗುರು ಗುರುಸಿದ್ಧೇಶ್ವರರ ಕೀರ್ತನೆ ಮಾಡಬೇಕು ಎಂದು ಅಪ್ಪಣೆ ಮಾಡಿದರು. ಆದರೆ ಸರಿಯಾದ ಸಾಹಿತ್ಯಗಳನ್ನು ಒದಗಿಸಿಕೊಳ್ಳಲು ನಾನು ಎಂಟು ದಿವಸಗಳ ಕಾಲಾವಕಾಶ ಪಡೆದುಕೊಂಡೆ. ಸರಿಯಾದ ರೀತಿಯಲ್ಲಿ ಚರಿತ್ರೆಯನ್ನು ರಚಿಸಿಕೊಳ್ಳಲು, ಹಲವು ಗ್ರಂಥಗಳನ್ನು ಜಗದ್ಗುರು ಮಹಾಸನ್ನಿಧಿಯವರು ಒದಗಿಸಿಕೊಟ್ಟರು. ಗ್ರಂಥಗಳಲ್ಲದೆ ಹನ್ನೆರಡನೆಯ ಶತಮಾನದ ಪ್ರಾಚೀನತೆಯನ್ನು ಸ್ಪಷ್ಟಪಡಿಸುವ ವರದರಾಜ ಉಮರ್ಜಿಯವರು "ಕರ್ಮವೀರ" ದಿನಪತ್ರಿಕೆಯಲ್ಲಿ ಕೊಟ್ಟಿದ್ದ ಲೇಖನ ಪ್ರಮಾಣದಿಂದಲೂ ಈ ಎಲ್ಲ ಪ್ರಮಾಣಗಳಿಂದ ಎಂಟು ದಿವಸದೊಳಗೆ ಸಂಕ್ಷಿಪ್ತವಾಗಿ ಒಂದು ಚರಿತ್ರೆಯನ್ನು ರಚಿಸಿಕೊಂಡು ಶ್ರಾವಣಮಾಸದ ಕೊನೆಯಲ್ಲಿ ಮೂರು ದಿವಸಗಳ ವರೆಗೆ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರರ ಕೀರ್ತನೆಯನ್ನು ಕೇಳಲು ಎಂದಿಗಿಂತಲೂ ಹೆಚ್ಚಾಗಿ ಅಪಾರದ ಜನಸ್ತೋಮ ನೆರೆದಿತ್ತು. ಕರ್ತೃವಿನ ಕೀರ್ತನೆಯು ಶ್ರೋತ್ರುಗಳಿಗೆ ಒಳ್ಳೆಯ ಪರಿಣಾಮವನ್ನು ಬೀರಿತು. ಜಗದ್ಗುರು ಮಹಾಸನ್ನಿಧಿಯವರೂ ಬಹಳ ಸಂತೋಷಪಟ್ಟರು. ಅಂತೂ ಕರ್ತೃ

ಜಗದ್ಗುರು ಗುರುಸಿದ್ಧೇಶ್ವರರ ಕೃಪಾಶೀರ್ವಾದಿಂದ ಕೀರ್ತನೆ ಸಮಾಪ್ತಿಯಾಯಿತು.

ಆದರೆ ಕೀರ್ತನೆಯನ್ನು ಕೇಳಿದ ಕೆಲವು ಪೀಠಾಭಿಮಾನಿಗಳು ಕೀರ್ತನೆಯ ಇದೇ ಚರಿತ್ರೆಯ ಸಾರವನ್ನು ಇನ್ನೂ ವಿಸ್ತಾರವಾಗಿ ಮುದ್ರಿಸಿ ಪುಸ್ತಕ ರೂಪದಲ್ಲಿ ಭಕ್ತರಿಗೆ ಒದಗಿಸಿದರೆ ಬಹಳ ಚೆನ್ನಾಗಿರುತ್ತದೆ ಎಂದು ನನಗೆ ತಿಳಿಸಿದರು. ಆದರೆ ನಾನು ಲೇಖಕನೂ ಅಲ್ಲ ಸಾಹಿತಿಯೂ ಅಲ್ಲ, ಎಂದು ತಿಳಿಸಿದೆ. ಆದರೂ ಎಲ್ಲರೂ ಮತ್ತೆ ಒತ್ತಾಯಮಾಡಲಾರಂಭಿಸಿದರು. ಜಗದ್ಗುರು ಮಹಾಸನ್ನಿಧಿಯವರ ವರೆಗೂ ಈ ಸುದ್ದಿ ಮುಟ್ಟಿತು. ಆಗ ಜಗದ್ಗುರು ಮಹಾಸನ್ನಿಧಿಯವರು ನನ್ನನ್ನು ಕರೆದು "ಕರ್ತೃ ಜಗದ್ಗುರು ಗುರುಸಿದ್ಧೇಶ್ವರರ ಲೀಲಾಮೃತ" ಎಂಬ ಕಿರುಹೊತ್ತಿಗೆಯನ್ನು ಬರೆಯಲು ಅಪ್ಪಣೆ ಮಾಡಿದರು. ಈಗಂತೂ ನನಗೆ ದೊಡ್ಡ ಸಮಸ್ಯೆಯೇ ಆಯಿತು. ಹೇಗಾದರೂ ಮಾಡಿ ಕೀರ್ತನೆ ಮಾಡಿ ಮುಗಿಸಿದೆ. ಕೀರ್ತನೆಯು ನನ್ನ ಉದ್ಯೋಗವಾದ್ದರಿಂದ ಹೇಗಾದರೂ ಸಾಧಿಸಿದೆ ಆದರೆ ಗ್ರಂಥ ರಚನೆಯಲ್ಲಿ ನನಗೆ ಅನುಭವವಿಲ್ಲದ್ದರಿಂದ ಚಿಂತಿಸಬೇಕಾಯಿತು. ಮೇಲಾಗಿ ನಾನು ಮೂರು ದಿವಸಗಳ ವರೆಗೆ ಮಾಡಿದ ಕೀರ್ತನೆಯೂ ಸಹ ಸರಿಯಾಗಿ ಜ್ಞಾಪಕವಿಲ್ಲವೆಂದು ಒಂದು ನೆಪ ಹೇಳಿದೆ. ಆಗ ಅಲ್ಲಿ ಇದ್ದ ಪೀಠಾಭಿಮಾನಿಗಳಲ್ಲೊಬ್ಬರಾದ ಡಾ|| ಹೊಂಬಾಳ ಎಂಬವರು, ನೀವು ಚಿಂತೆ ಮಾಡಬೇಡಿರಿ. ನಿಮ್ಮ ಮೂರು ದಿವಸಗಳ ಸಂಪೂರ್ಣ ಕೀರ್ತನೆಯನ್ನು ಟೇಪ್‌ರಿಕಾರ್ಡ್ ಮಾಡಿಕೊಂಡಿದ್ದೇವೆ. ನಿಮಗೆ ಬೇಕಾದಾಗ ಹಚ್ಚಿಕೊಡುತ್ತೇವೆ ಎಂದು ಆಗಿಂದಾಗ್ಗೆ ಹಚ್ಚಿ ತೋರಿಸಿದರು. (ಆರು ತಾಸುಗಳ ಟೇಪ್ ರಿಕಾರ್ಡ ಆಗಿದೆ.)

ಜಗದ್ಗುರು ಮಹಾಸನ್ನಿಧಿಯವರು ಆಶೀರ್ವದಿಸಿ ನನಗೆ ಧೈರ್ಯಹೇಳಿ ಕಡೆಗೆ ಒಂದು ಮಾತು ಅಪ್ಪಣೆ ಕೊಡಿಸಿದರು. ಶಬ್ದ ಸಂಗ್ರಹಗಳಿಲ್ಲದಿದ್ದರೂ ಅಡ್ಡಿಯಿಲ್ಲ. ಹೆಚ್ಚಾದ ಪಾಂಡಿತ್ಯ ಪ್ರತಿಭೆಗಳೂ ಆವಶ್ಯವಿಲ್ಲ ಕರ್ತೃ ಗುರುಸಿದ್ಧೇಶ್ವರನು ನಿಮಗೆ ಎಷ್ಟರ ಮಟ್ಟಿಗೆ, ಮತಿನೀಡುವನೋ, ನಿಮಗೆ ಸಾಧ್ಯವೋ ಅಷ್ಟು ಸಾಮಾನ್ಯ ಜನರಾಡುವ ಸುಲಭ ಶೈಲಿಯ ಭಾಷೆಯಿಂದ ಬರೆದು ಬಿಡಿರಿ. ಕರ್ತೃ ಗುರುಸಿದ್ಧೇಶ್ವರನು ಹೇಗಾದರೂ, ಯಶಸ್ವಿಯಾಗಿ-'ಸುತ್ತಾನೆ'ಂಬ ಅಭಯ ವಚನವನ್ನು ನೀಡಿ ಆಶೀರ್ವದಿಸಿದರು.

ಆಗ ನನಗೆ ಸ್ವಲ್ಪ ಧೈರ್ಯ ಬಂದಿತು. ಆದರೂ, ಗ್ರಂಥರಚನೆಗೆ ಕೆಲವು ಪ್ರಮಾಣಗಳು ಅವಶ್ಯ ಬೇಕಾಗುವವು. ಅದಕ್ಕೇನು ಮಾಡಲಿ ?

ಮೊದಲನೆಯ ಸಮಸ್ಯೆಯೆಂದರೆ ಹುಬ್ಬಳ್ಳಿಯ ಮೂರುಸಾವಿರಮಠದ ಇತಿಹಾಸದ ಹಾಗೂ ಕಾಲನಿರ್ಣಯದ ಬಗ್ಗೆ ಹಲವರು ಹಲವು ಬಗೆಯಿಂದ ಬರೆದಿದ್ದಾರೆ. ಯಾವುದು ಸತ್ಯವಾದುದು, ಎಂದು ನನಗೆ ಪ್ರಥಮದಲ್ಲಿ ಚಿಂತೆಯಾಗಿತ್ತು.

ಶ್ರೀ ಕಲ್ಲೂರ ಸಂಗಣ್ಣನವರ ಹೊಂಬೆಳಗು.

ಪ್ರೊ॥ ಜಿ. ಎಚ್. ಹನ್ನೆರಡುಮಠರವರ ಚಿತ್ರಭೆ

ಬಿ. ಪುಟ್ಟಸಾಮಯ್ಯನವರ ಕ್ರಾಂತಿ ಕಲ್ಯಾಣ.

ಪ್ರೊ॥ ವರದರಾಜ ಉಮರ್ಜಿಯವರ ಶಿಲಾ ಶಾಸನ D. L. ನರಸಿಂಹಾಚಾರ. M. A. ಡಿಲಿಟ್‌ರವರ ಕನ್ನಡ ಗ್ರಂಥ ಸಂಪಾದನೆ. ಇನ್ನೂ ಕೆಲವು ಗ್ರಂಥಗಳನ್ನು ಓದಿದ್ದಾಯಿತು. ಆದರೆ ಮೂರುಸಾವಿರಮಠದ ಬಗ್ಗೆ ಒಬ್ಬೊಬ್ಬರು ಒಂದೊಂದು ತರದಲ್ಲಿ ಅಭಿಪ್ರಾಯಪಟ್ಟಿರುವುದರಿಂದ ನನಗೆ ಏನೂ ತೋಚದಂತಾಯಿತು.

ಕಡೆಗೆ ಪ್ರೊ॥ ಜಿ॥ ಎಚ್॥ ಹನ್ನೆರಡುಮಠರವರು ಚಿತ್ರಭೆಯಲ್ಲಿ ಕೊಟ್ಟಿರುವ ಲೇಖನವನ್ನು ಮತ್ತೊಮ್ಮೆ ಸಾವಧಾನದಿಂದ ಓದಿ ನೋಡುವಾಗ ಪ್ರೊ॥ ಜಿ. ಹೆಚ್. ಹನ್ನೆರಡುಮಠರವರ ಅಭಿಪ್ರಾಯವೇ ಮಾನ್ಯವೂ ಗ್ರಾಹ್ಯವೂ ಎಂದು ನನಗನಿಸಿತು.

ಪ್ರೊ. ಜಿ. ಎಚ್. ಹನ್ನೆರಡುಮಠರವರ ಚಿತ್ರಭೆಯಲ್ಲಿ ತೇಲಿಸಿದ ಲೇಖನ:-

## 'ಮೂರುಸಾವಿರ' ಹೆಸರಿನ ಮೂಲವೆಲ್ಲಿ ?

ಅಲ್ಲಮಪ್ರಭುದೇವರು ಶೂನ್ಯಪೀಠದ ಪರಂಪರೆಯಲ್ಲಿ ಅನೇಕ ಜಗದ್ಗುರು ಪೀಠಗಳೂ ನಿರಂಜನ ಪೀಠಗಳೂ ಕನ್ನಡ ನಾಡಿನಲ್ಲಿ ಮೈದಾಳಿದವು. ಕೊನೆಗೆ ಕಲ್ಯಾಣದ ರಕ್ತಕ್ರಾಂತಿಯಾಯಿತು. ಆಗ ಅಲ್ಲಿಯ ಮೂರುಸಾವಿರ ಜನ ಭಕ್ತಮಾಹೇಶ್ವರರು ಆಶ್ರಯಕ್ಕೆಂದು "ಪೂವಳ್ಳಿಗೆ" ಬಂದು ಇಲ್ಲಿಯ ಪುರಾತನ ಧರ್ಮಪೀಠದಲ್ಲಿ ತಂಗಿದರು. ಈ ಐತಿಹಾಸಿಕ ಘಟನೆಯ ಪರಿಣಾಮವಾಗಿ ಇದು ಮೂರುಸಾವಿರಮಠವಾಯಿತೆಂದು ಹಲವರ ಅಭಿಪ್ರಾಯ.

ಈ ಮೇಲಿನ ಪ್ರೊ. ಜಿ. ಎಚ್. ಹನ್ನೆರಡುಮಠರವರ ಈ ಮೂರು ಸಾವಿರಮಠದ ಅಭಿಪ್ರಾಯವನ್ನೂ ಶಿರಸಿಶಾಸನದ ಆಧಾರವನ್ನೂ ದ್ಯಾಂಪುರದ ಚೆನ್ನಕವಿಗಳ "ಚಿತ್ತರಗಿ ವಿಜಯ ಮಹಾಂತ ಶಿವಯೋಗಿಶ್ವರರ ಪುರಾಣದಲ್ಲಿ ಬರುವ ಮೂರುಸಾವಿರ ಜಂಗಮರ ವಿಷಯದ ಆಧಾರ ಪ್ರಮಾಣಗಳಿಂದಲೂ. ದ್ಯಾಂಪುರದ ಚೆನ್ನಕವಿಗಳು ತಮ್ಮ ವಿಜಯ ಮಹಾಂತೇಶ್ವರ ಪುರಾಣದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಅಲ್ಲಮ ಪ್ರಭುದೇವರ ನೇತೃತ್ವದಲ್ಲಿ ಮೂರುಸಾವಿರ ಜಂಗಮ (ವಿರಕ್ತರು) ರು ಕರ್ನಾಟಕದಲ್ಲೆಲ್ಲಾ ಸಂಚಾರ ಮಾಡಿದರು. ಎಂಬ ಆಧಾರದಿಂದಲೂ—

ತಮಿಳು ಭಾಷೆಯಲ್ಲಿನ "ಮಾಣಿಕ್ಯವಾಚಕರ್‌ವರಲಾರು" ಅಂದರೆ "ಮಾಣಿಕ್ಯವಾಚಕರ ಚರಿತ್ರೆ" ಎಂಬ ಕೈ ಬರಹದ ಗ್ರಂಥದಲ್ಲಿನ ಆಧಾರದಿಂದಲೂ ಕಲ್ಯಾಣತ್ತಿಲಿರುಂದು ಮೂವಾಯಿರಂ ಜಂಗಮರ್‌ಗಳ್ ಮೂವಾಯಿರಂ ಜಂಗಮರ್‌ಗಳ್ ತಮಿಳ್ ನಾಟ್ಟಿರ್ಕ್ಕು ಎಳುಂದಳಿ ವೀರಶೈವ ಧರ್ಮತ್ತೈ ಪರಪ್ಪಿ ಚೆನ್ನಬಸವೇಶ್ವರರೈನೋಕ್ಕಿ ಕರ್‌ನಾಡಗಂಶೆನ್ರು

ಅಂದರೆ ಕಲ್ಯಾಣದಿಂದ ಬಂದ ಮೂರುಸಾವಿರ ಜಂಗಮ ವಿರಕ್ತರು ತಮಿಳು ನಾಡಿನಲ್ಲಿ ವೀರಶೈವ ಧರ್ಮವನ್ನು ಪ್ರಚಾರಮಾಡಿ ಚೆನ್ನಬಸವಣ್ಣನವರ ಸಲುವಾಗಿ ಮರಳಿ ಕರ್ನಾಟಕಕ್ಕೆ ಹೋಗಿ ಎಂದು ಅರ್ಥವಾಗುತ್ತದೆ.

ಈ ಕೈ ಬರಹದ ಗ್ರಂಥವು ಈಗ ತಮಿಳುನಾಡಿನ ತಿರುಚ್ಚಿಯಲ್ಲಿ ಕಂದಸ್ವಾಮಿ ಅಯ್ಯ ಎಂಬುವರ ಹತ್ತಿರವಿದೆ. ಅದರ ಮೂಲ ಹಸ್ತ ಬರಹದ ಪ್ರತಿ ಮಾಣಿಕ್ಯ ವಾಚಕರ ಸಮಾಧಿಯಿರುವ ದೇವಸ್ಥಾನದಲ್ಲಿದೆ.

ಹೀಗೆ ಮೂರುಸಾವಿರ ಜಂಗಮರು ಹನ್ನೆರಡನೆಯ ಶತಮಾನದಲ್ಲಿದ್ದವರು ಎಂಬ ಆಧಾರದ ಪ್ರಮಾಣಗಳು ದೊರೆತನಂತರ ನಾನು ಹುಬ್ಬಳ್ಳಿಯ ಮೂರುಸಾವಿರಮಠದಲ್ಲಿದ್ದ ವಯೋವೃದ್ಧರಾದ ಲಿಂ. ಸೊಲಬಪ್ಪಜ್ಜನವರಿಂದ ಇದೇ ಪ್ರಮಾಣದ ಕರ್ತೃ ಗುರುಸಿದ್ಧೇಶ್ವರ ಜಗದ್ಗುರುಗಳವರ ಬಗ್ಗೆ ಅವರಿಗೆ ತಿಳಿದಿರುವಷ್ಟು ಚರಿತ್ರೆಯನ್ನು ಹುಬ್ಬಳ್ಳಿಯ ಕೆಲವು ಪೀಠಾಭಿಮಾನಿಗಳಿಂದ ದೊರೆತ ಸಂಗ್ರಹವನ್ನು,ಹುಬ್ಬಳ್ಳಿಯ ಸುತ್ತುಮುತ್ತಲಿನ ಪ್ರದೇಶದ ಪೀಠಾಭಿ

ಮಾನಿಗಳಿಂದ ಸಂಗ್ರಹಿಸಿದ ಕೆಲವು ಪ್ರಸಂಗಗಳನ್ನು ಒಟ್ಟುಗೂಡಿಸಿ ಕರ್ತೃ ಜಗದ್ಗುರು ಗುರುಸಿದ್ಧೇಶ್ವರನು ನನಗೆ ಕರುಣಿಸಿದಷ್ಟು ಕಥಾ ಭಾಗವನ್ನು ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಲೀಲಾಮೃತ"ವೆಂಬ ಹೆಸರಿನಲ್ಲಿ ಈ ಕಿರು ಹೊತ್ತಿಗೆಯನ್ನು ಬರೆದು, ಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ಪವಿತ್ರ ಪಾದಂಗಳಲ್ಲಿ ಭಕ್ತಿಪೂರ್ವಕವಾಗಿ ಅರ್ಪಿಸಿದ್ದೇನೆ.

ಹುಬ್ಬಳ್ಳಿ ಮೂರುಸಾವಿರಮಠದ ಇತಿಹಾಸವನ್ನೂ ಮುಖ್ಯ ಆಧಾರವಾಗಿಟ್ಟುಕೊಂಡು ಬರೆದಿದ್ದೇನೆ. ೨೦ ಗ್ರಂಥಗಳ ಆಧಾರದಿಂದ ಇಷ್ಟೆಲ್ಲಾ ಪ್ರಯಾಸದಿಂದ ಬರೆದ ಈ ಕಿರು ಹೊತ್ತಿಗೆಯನ್ನು ಮೊದಲಿನಿಂದ ಕೊನೆಯವರೆಗೆ ಚೆನ್ನಾಗಿ ಪರಿಶೀಲಿಸಿ ದೋಷಗಳನ್ನು ತಿದ್ದಿ ಕರುಣಿಸಿದವರು ಪೂಜ್ಯ ಶ್ರೀ|| ಮ|| ಘ|| ಚ. ಡಾ. ಕೆಳದಿ ಪಟ್ಟಾಧ್ಯಕ್ಷರು. ಅವರ ಪವಿತ್ರಪಾದಪದ್ಮಂಗಳಲ್ಲಿಯೂ ಭಯಭಕ್ತಿಗಳಿಂದ ಶಿ. ಸಾ. ಪ್ರಣಾಮಗಳನ್ನು ಅರ್ಪಿಸುತ್ತೇನೆ. ಇನ್ನು ಈ ಗ್ರಂಥವನ್ನು ಶರವೇಗದಿಂದ ಸುಂದರವಾಗಿ ಪರಂಜ್ಯೋತಿ ಮುದ್ರಣಾಲಯದಲ್ಲಿ ಮುದ್ರಿಸಿಕೊಟ್ಟ ಪೂಜ್ಯ ಕಲ್ಯಾಣದ ಪ್ರಭುದೇವರ ಮಠದ, ಪ್ರಭುಸ್ವಾಮಿಗಳವರಿಗೂ ಹಾಗೂ ಪ್ರಕಾಶಕರಾದ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲದವರಿಗೂ ನಾನು ಅನೇಕ ಪ್ರಣಾಮಗಳನ್ನು ಅರ್ಪಿಸುತ್ತೇನೆ.

**ಪಂ. ಬಸವಕುಮಾರ ಶಾಸ್ತ್ರಿಗಳು**
ಕುಂದರ್ಪಿಮಠ ಧಾರವಾಡ.



## ಈ ಪುಸ್ತಕ ಬರೆಯಲು ದೊರೆತ ಆಧಾರ ಸಾಹಿತ್ಯ.

೧) ಶಿರಸಿ ಶಾಸನದ ಆಧಾರ ಕಾಗದ.
೨) ಶೂನ್ಯ ಸಿಂಹಾಸನ. ಎಸ್. ಎನ್. ಲಿಂಗಯ್ಯ ಬರೆದುದು
೩) ಮೂರುಸಾವಿರಮಠದ ಇತಿಹಾಸವು
(ಕಿತ್ತೂರಿನವರು ೧೯೦೨ ನೇ ಇಸ್ವಿಯಲ್ಲಿ ಪ್ರಕಟಿಸಿದುದು
೪) ಹೊಂಬೆಳಗು
೫) ಚಿತ್ರಭೆ
೬) ಜಗದ್ಗುರು ಗುರುಸಿದ್ಧೇಶ್ವರ ಪುರಾಣ
೭) ಗುರುಸಿದ್ಧೇಶ್ವರ ಭಕ್ತಿಗೀತ
೮) ಗುರುಸಿದ್ಧೇಶ್ವರ ನಾಮಾವಳಿ
೧೦) ವಿಶ್ವವಾಣಿ ಸನ್ ೧೯೭೫.
೧೧) ಸಂಯುಕ್ತ ಕರ್ನಾಟಕ ೧೯೭೪
೧೨) ಮೂರುಸಾವಿರಮಠದ ವಿಹಂಗಮ ನೋಟ
೧೩) Life Sketch
೧೪) ಕರ್ಮವೀರ ವಾರಪತ್ರಿಕೆ
೧೫) ಕನ್ನಡ ಗ್ರಂಥ ಸಂಪಾದನೆ
(ಡಾ. ಡಿ. ಎಲ್. ನರಸಿಂಹಾಚಾರ್ಯರು ಬರೆದುದು)
೧೬) ಈಶ್ವರಂಜ್ಯೋತಿ ಮಾಸಿಕ
೧೭) ಚಿತ್ತ... ಸಗಿ ವಿಜಯಮಹಾಂತೇಶ್ವರ ಪುರಾಣ
೧೮) ಮಾಣಿಕ್ಯ... ವಾಚಕರ್ ವರೂರ
೧೯) ಕ್ರಾಂತಿ ಕಲ್ಯಾಣ
೨೦) ಬಾಂಬೆ ಗೆಜಿಟ್

★ ★

# ಮುನ್ನುಡಿ

ಗುರುಸಿದ್ಧೇಶ್ವರೇಣಾತ್ರ । ಕೃತಾ ಲೀಲಾ ಕೃಪಾತ್ಮಿಕಾ ।
ಪಠ್ಯ-ಪುಸ್ತಕ-ರೂಪೇಣ । ಲಿಖಿತಾ ಶಾಸ್ತ್ರಿಣಾ ಮುದಾ ॥

"ಹನ್ನೆರಡನೆ ಶತಮಾನದಲ್ಲಿ ಗುರುಸಿದ್ಧನು ಅವತರಿಸಿ, । ಘನ ಮಹಿಮ ನಿರಂಜನ ಜಂಗಮ ಮೂರುತಿಯೆನಿಸಿದನು॥"(ಪುಟ : ೧) ಎಂಬ ಈ ಮಾತು ಈ 'ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ-ಲೀಲಾಮೃತ' ಪುಸ್ತಕದಲ್ಲಿಯ ಸಾರಾಂಶದ ಮಾತಾಗಿದೆ.

ಸಾರಾಂಶದ ಈ ಮಾತನ್ನು ಪುಸ್ತಕದ ಮೊದಲನೆಯ ಪುಟದಲ್ಲಿಯ 'ಸ್ತವನ'ದ ಮೊದಲನೆಯ ನುಡಿಯಲ್ಲಿಯೇ ಈ ಪುಸ್ತಕದ ಸಿದ್ಧಾಂತದ ವಾಕ್ಯವನ್ನಾಗಿ ಸೂಚಿಸಿರುವ ಲೇಖಕ : ಶ್ರೀ ಬಸವಕುಮಾರ ಶಾಸ್ತ್ರಿಗಳು ತಮ್ಮ ಸದ್‌ಭಾವನೆಯಂತೆ ಮೂರುತಿಯೆನಿಸಿದ 'ಕರ್ತೃ ಶ್ರೀ ಜಗದ್ಗುರು ಗುರು-ಸಿದ್ಧೇಶ್ವರನು ಆದಿಯಲ್ಲಿ ಪರಬ್ರಹ್ಮನೂ ಅನುಪಮನೂ ಅದ್ವಯನೂ ಆದಿಯನಾದಿಯಿಂದ ಅತ್ತಲತ್ತ ಶಿವ-ಶಕ್ತಿಯೇ ತಾನಾಗಿ ಅವತರಿಸಿ....ದಿಟ್ಟಿಯಿಂದ ಮೂಜಗವನು ಪೊರೆಯುವ ಶ್ರೇಷ್ಠ ಗುರುವರನು' (ಪುಟ : ಅದೇ) ಎಂಬುದಾಗಿ ಪದ್ಯಾತ್ಮಕ-ಸ್ತವನದಲ್ಲಿ ಕಥಾ-ವಸ್ತುವನ್ನು ಪರಿಚಯ ಮಾಡಿಸಿದ್ದಾರೆ.

ಪರಿಚಯ ಮಾಡಿಕೊಡಬಯಸಿರುವ ಮಾನ್ಯ ಕೀರ್ತನಕಾರ: ಕವಿಹೃದಯದ ಶಾಸ್ತ್ರಿಗಳು ತಾವು ಈ ಮುಂಚೆ ಓದಿ ತಿಳಿದುಕೊಂಡ ಪ್ರಕಾರ 'ಕೈಲಾಸದ ವರ್ಣನೆಯನ್ನು ಮಾಡಿದ್ದಾರೆ. ಅಲ್ಲಿ ನಡೆಯಿತೆನ್ನಲಾದ ನಾರದನ ಹಾಗು ಶಂಕರನ (=ಶಿವನ) ಪರಸ್ಪರ ಸಂಭಾಷಣೆಯನ್ನೂ ಸಹ ನೆನಪು ಮಾಡಿಕೊಟ್ಟಿದ್ದಾರೆ, ಶಾಸ್ತ್ರಿಗಳು.

ಶಾಸ್ತ್ರಿಗಳು ತಿಳಿಸಿರುವಂತೆ-"ಭೂಲೋಕದ ವಿಶೇಷ ವಾರ್ತೆಯೇನಾದರೂ ಇದೆಯೇ?" ಎಂದು ಶಂಕರನು ಕೇಳಿದ್ದಕ್ಕೆ, ನಾರದರಿಂದ ಉತ್ತರ ರೂಪವಾಗಿ ದೊರೆತ ಸಲಹೆ ಇದು:—"....ನೀತಿ ಧರ್ಮಗಳು ಶಿಥಿಲವಾಗಿವೆ. ಆದ್ದರಿಂದ ಭೂಲೋಕದ ಸಮಸ್ತ ಮಾನವರ ಕಲ್ಯಾಣಕ್ಕಾಗಿ ಹಾಗೂ ಶಿವ

ಧರ್ಮದ ಜ್ಯೋತಿಯನ್ನು ಬೆಳಗಿಸುವುದಕ್ಕಾಗಿ ನಿನ್ನ (ಶಂಕರನ) ನಿರಂಜನ ಸ್ವರೂಪವನ್ನು ಧರೆಗೆ ಕಳುಹಿಸಿ, ಜನರನ್ನೂ ಉದ್ಧರಿಸಬೇಕೆಂದು ಪ್ರಾರ್ಥಿಸುತ್ತೇನೆ" (ಪುಟ: ೪)

ಪ್ರಾರ್ಥನೆಯನ್ನು ಸ್ವೀಕರಿಸಿದ ಶಂಕರನು "ಕೈಲಾಸದ ಪ್ರತಿಯೊಬ್ಬರಿಗೂ ಒಂದೊಂದು ಪಾತ್ರವನ್ನು ವಹಿಸಿಕೊಟ್ಟು ....(ಪುಟ : ೫) ಹುಬ್ಬಳ್ಳಿಯಲ್ಲಿ ಗುರುಸಿದ್ಧೇಶ್ವರರ ನಾಮದಿಂದ ಪ್ರಕಟವಾಗಿ ಶಿವಧರ್ಮದ ಉದ್ಧಾರಗೈಯುತ್ತೇನೆ" (ಪುಟ : ೬) ಎಂದಂತೆಯೇ ಮಾಡಿದ್ದಾನೆ. ಅವನು ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರರಾಗಿ ಹುಚ್ಚನಾಗಿ ಅನಂತ ಪವಾಡಗಳನ್ನು ಮಾಡಿ, ಭಕ್ತರನ್ನುದ್ಧರಿಸಿದ ಈ "ಕರ್ತೃ ಜಗದ್ಗುರು ಗುರುಸಿದ್ಧೇಶ್ವರರು ಸಮಸ್ತ ವಿರಕ್ತರನ್ನೂ ಕರೆದು ಅವರೆಲ್ಲರಿಗೂ ಕೆಲವು ಮುಖ್ಯವಾದ ಉಪದೇಶದ ಮಾತುಗಳನ್ನು ತಿಳಿಸುತ್ತ 'ಕಾಯಕವೇ ಕೈಲಾಸ'ದ ಮಹಿಮೆ ವಿವರಿಸಿ, ದೇಶದ ತುಂಬೆಲ್ಲ ಧರ್ಮಪ್ರಚಾರಾರ್ಥ ಪ್ರತಿಯೊಬ್ಬರೂ (ಮೂರು ಸಾವಿರ ವಿರಕ್ತರು) ಮಠಗಳನ್ನು ಸ್ಥಾಪಿಸಿ, ಬಸವ ತತ್ತ್ವಪ್ರಚಾರ ಮಾಡಬೇಕೆಂದು ಆಶೀರ್ವದಿಸಿ, ಗ್ರಾಮದ ಸಮಸ್ತ ಭಕ್ತಾದಿಗಳನ್ನು ಕರೆಸಿಕೊಂಡು ಅವರಿಗೂ ಉಪದೇಶಾಮೃತ ಆಶೀರ್ವಾದಗಳನ್ನು ಗೈದು, ಸಹಸ್ರಾರು ವಿರಕ್ತರ, ಶರಣರ, ಅಸಂಖ್ಯಾತ ಭಕ್ತಾದಿಗಳ ಸಮಕ್ಷದಲ್ಲಿ ಗವಿಯೊಳಗೆ ಪ್ರವೇಶ ಮಾಡಿ....ಹುಬ್ಬಳ್ಳಿಯ ಮೂರುಸಾವಿರಮಠದಲ್ಲಿ ಜೀವಂತ ನಿರ್ವಿಕಲ್ಪ ಸಮಾಧಿಯಲ್ಲಿ ಕುಳಿತು, ಕರ್ತೃವಾಗಿ ಗದ್ದುಗೆ ಮರೆಯಿಂದಲೇ, ಮಠಕ್ಕೆ ದರ್ಶನಾರ್ಥಿಗಳಾಗಿ ಬರುವ ಲಕ್ಷಾಂತರ ಭಕ್ತರಿಗೆ ಬೇಡಿದ ಇಷ್ಟಾರ್ಥಗಳನ್ನು ಸಲ್ಲಿಸುತ್ತಾ ಜಾತಿ ಮತ ಪಂಥಗಳೆಂಬ ಭೇದ-ಭಾವವಿಲ್ಲದೆ ಎಲ್ಲರನ್ನೂ ಕೃಪಾದೃಷ್ಟಿಯಿಂದ ಆಶೀರ್ವದಿಸಿ ಸಲಹುತ್ತಾ'' (ಪುಟ: ೬೯) ಇದ್ದಾನೆ, ಗುರುಸಿದ್ಧೇಶ್ವರನು.

ಆಶೀರ್ವದಿಸಿ ಸಲಹುತ್ತಿರುವ ಈ ಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ಮುಖ್ಯ ಕೇಂದ್ರದ ಮಠದ ಪ್ರಾಚೀನತೆಯ ಬಗ್ಗೆ ಶಾಸನಾದಿಗಳ ಆಧಾರಗಳನ್ನು ಸೂಚಿಸಿರುವ ಮಾನ್ಯ ಲೇಖಕರು ಹನ್ನೆರಡನೆಯ ಶತಮಾನದಿಂದ ಏರಿಳಿತಗಳಲ್ಲಿ ಸಾಗಿ ಬಂದ ಈ ಮಠದ ಇತ್ತೀಚೆಗಿನ ಮೂವರು ಜಗದ್ಗುರುಗಳ ಸಂಕ್ಷಿಪ್ತ ಪರಿಚಯವನ್ನೂ ಪಾಠಕರ ಮುಂದಿಟ್ಟಿದ್ದಾರೆ.

ಪಾಠಕರ ಮುಂದಿರುವ ಈ 'ಲೀಲಾಮೃತ' ಪುಸ್ತಕದ ಲೇಖಕರಾದ ಮಾನ್ಯ ಶ್ರೀ ಬಸವಕುಮಾರ ಶಾಸ್ತ್ರಿಗಳು ತಮ್ಮ ಜೀವನವನ್ನೇ ಶಿವಶರಣರ ಸಂತರ ಶಿವ-ಕೀರ್ತನೆ ಮಾಡಲೆಂದೇ ಮುಡುಪಾಗಿಟ್ಟುಕೊಂಡು ಯಶಸ್ವೀ ರೀತಿಯಿಂದ ಜೀವನ ಸಾಗಿಸುತ್ತಿರುವರು. ಇವರು ಸಭೆಯಲ್ಲಿ ಕೀರ್ತನೆ ಮಾಡುತ್ತಿರುವಾಗ ತನ್ಮಯರಾಗಿ ತಮ್ಮ ಕಾಲಿನ ಹೆಜ್ಜೆಯ ಗೆಜ್ಜೆಯನ್ನು ನುಡಿಸುತ್ತ ಭಾವಾವೇಶದಿಂದ ಸಭಿಕರಿಗೆ ಮಹಿಮರ ಚರಿತ್ರೆಯನ್ನು ತಿಳಿಸಿ ಕೊಡುತ್ತಿರುವ ಹಾಗೆ ವಾಚಕರಿಗೂ ಗ್ರಂಥರೂಪದಲ್ಲಿ 'ಲೀಲಾಮೃತ'ವನ್ನು ತಿಳಿಸಿಕೊಡುವ ಸದುದ್ದೇಶದಿಂದ ಈ ಕೃತಿಯನ್ನು ಶಾಸ್ತ್ರಿಗಳು ತಮ್ಮ ಕೀರ್ತನೆ ಶೈಲಿಯನ್ನು ಮೀರಲಾರದ ಹಾಗೆ ಮೊದಲ ಪುಸ್ತಕವನ್ನಾಗಿ ರಚಿಸಿದ್ದಾರೆ. ಕೀರ್ತನ ಹೇಳುವವರಿಗೆ ಅನುಕೂಲವಾಗುವಂತೆ, ಕೀರ್ತನಶೈಲಿಯ ಸರಳ ಭಾಷೆಯಲ್ಲಿ ಬರೆದಿದ್ದಾರೆ.

ಪುಸ್ತಕ ರಚನೆಯ ಈ ಕಾರ್ಯದಲ್ಲಿಯೂ ಸಹ ಪ್ರಯತ್ನಶೀಲರಾದ ಶಾಸ್ತ್ರಿಗಳು ಇತ್ಯೋಪ್ಯತಿಶಯವಾಗಿ ಸಿದ್ಧಿ-ಸಮೃದ್ಧ-ಹಸ್ತದವರಾಗಲೆಂದು ಹಾರೈಸಲಾಗಿದೆ.

ರಾಜಗುರು ಹಿರೇಮಠ, ಡಾ|| ಗುರುಸಿದ್ಧದೇವ ಶಿವಾಚಾರ್ಯರು
ಕೆಳದಿ–೫೭೭೪೦೧ (ಎಂ. ಎ; ಪಿ. ಎಚ್. ಡಿ.)



# ಪ್ರಕಾಶಕರ ನುಡಿ

ನಿರ್ವಿಕಲ್ಪ ಸಮಾಧಿಸ್ಥರಾಗಿರುವ ಹುಬ್ಬಳ್ಳಿ ಕರ್ತೃ ಜಗದ್ಗುರು ಗುರುಸಿದ್ಧ ಮಹಾಶಿವಯೋಗಿಗಳ ಜೀವನ ಚರಿತ್ರೆಯನ್ನು ಪಂ. ಬಸವಕುಮಾರ ಶಾಸ್ತ್ರಿಗಳು ಧಾರವಾಡ ಅವರು ಬರೆದು ಮಹದುಪಕಾರ ಮಾಡಿದ್ದಾರೆ. ಗುರುಸಿದ್ಧೇಶ್ವರನ ಅದ್ಭುತ ಮಹಿಮೆ, ಯೌಗಿಕ ಶಕ್ತಿಯ ಪ್ರಭಾವ, ಅವರ ಪವಾಡಗಳು, ಪರಂಪರಾಗತವಾಗಿ ಭಕ್ತರ ಬಾಯಲ್ಲಿಯೇ ಉಳಿದಿತ್ತು. ಅದನ್ನು ಬರಹರೂಪದಲ್ಲಿ ನಾಡಿಗರ ಕೈಗೆ ನೀಡಿ ಕೃತಾರ್ಥರಾಗಿದ್ದಾರೆ.

ಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ಗದ್ದುಗೆಗೆ ನಡೆದುಕೊಂಡು ಸಹಸ್ರಾರು ಜನರು ಪುನೀತರಾಗಿದ್ದಾರೆ. ಇಷ್ಟಾರ್ಥ ಸಿದ್ಧಿಪಡೆದಿದ್ದಾರೆ. ಜಾತಿ ಮತಗಳ ಭೇದವನ್ನೆಣಿಸದೆ, ಎಲ್ಲ ಧರ್ಮದವರು ನಡೆದುಕೊಳ್ಳುತ್ತಿರು ವದು ಕರ್ತೃ ಗದ್ದುಗೆಯ ಪ್ರಭಾವ ಹಾಗು ಶ್ರೀ ಮೂರುಸಾವಿರಮಠದ ವೈಶಿಷ್ಟ್ಯವಾಗಿದೆ. ಶ್ರೀ ಮೂರುಸಾವಿರಮಠವು ಎಲ್ಲ ಧರ್ಮದ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿದೆ. ನೀಡುತ್ತಲಿದೆ. ಇಂತಹ ಪ್ರಭಾವಿ ಪೀಠದ ಕರ್ತೃ ಗುರುಸಿದ್ಧೇಶ್ವರನ ಚರಿತ್ರೆ ಹೊರಬರುತ್ತಿರುವದು ಹರ್ಷದಾಯಕವನ್ನುಂಟು ಮಾಡಿದೆ.

ಬರಹಗಾರರಾದ ಶ್ರೀ ಪಂ. ಬಸವಕುಮಾರ ಶಾಸ್ತ್ರಿಗಳು ಕೀರ್ತನಕಾರರು ಅಷ್ಟೇ ಅಲ್ಲ, ಅವರ ಮಾತೃ ಭಾಷೆ ತಮಿಳು,ಕನ್ನಡ ಭಾಷೆಯಲ್ಲಿ ಈ ಚರಿತ್ರೆ ಬರೆಯುತ್ತಿರುವದು ಅವರ ಸಾಹಸಕ್ಕೆ ಮೆಚ್ಚಬೇಕಾಗಿದೆ. ಈ ಚರಿತ್ರೆಯನ್ನು ಕೀರ್ತನಕಾರರಿಗೆ ಅನುಕೂಲವಾಗುವಂತೆ, ಶರಳ ಶೈಲಿಯಲ್ಲಿ ಬರೆದಿದ್ದಾರೆ. ಇದು ಅವರ ಮೊದಲಕೃತಿ ತಮಗೆ ತಿಳಿದಷ್ಟು ಸಂಶೋಧಿಸಿ ಬರೆದಿದ್ದಾರೆ. ಇನ್ನೂ ಕರ್ತೃ ಗುರುಸಿದ್ಧೇಶ್ವರನ ಮಹಿಮೆಯ ಬಗ್ಗೆ ಸಂಶೋಧನೆಮಾಡುವ ಯೋಜನೆಯನ್ನು ಮೂರುಸಾವಿರಮಠದ ಧರ್ಮ ಪ್ರಚಾರಕ ಮಂಡಳದವರು ಇಟ್ಟುಕೊಂಡಿದ್ದಾರೆ.

ಇನ್ನೂ ಪಂ. ಬಸವಕುಮಾರ ಶಾಸ್ತ್ರಿಗಳಿಂದ ಇಂತಹ ಚರಿತ್ರೆಗಳು ಹೊರ ಬಂದು ಜನಜಾಗೃತಿಯನ್ನುಂಟು ಮಾಡಲಿ. ಅವರಿಗೆ ಕರ್ತೃ ಗುರು ಸಿದ್ಧೇಶ್ವರನು ಆ ಶಕ್ತಿ ನೀಡಲೆಂದು ಆಶಿಸುತ್ತೇವೆ.

—ಪ್ರಕಾಶಕರು



ಪರಮತಪಸ್ವಿ ನಿರ್ವಿಕಲ್ಪ ಸಮಾಧಿಸ್ಥರಾದ ಕರ್ತೃ ಶ್ರೀ ಜಗದ್ಗುರು
ಗುರುಸಿದ್ಧೇಶ್ವರ ಶಿವಯೋಗಿಗಳ ಗದ್ದುಗೆ.

# ಕರ್ತೃ ಶ್ರೀಜಗದ್ಗುರು ಗುರುಸಿದ್ಧೇಶ್ವರ ಸ್ತವನ

[ ದಾಟಿ : "ಬಸವಲಿಂಗವೆಂಬೈದಕ್ಷರಗಳು" ಎಂಬಂತೆ ]



ಗುರುಸಿದ್ಧೇಶೆಂಬೈದಕ್ಷರಗಳು ಹೃದಯದಲಿರಬೇಕು |
ಪರಮ ನಿರಂಜನ ಜಗದ್ಗುರುವಿನ ನಾಮ್ ಮರೆಯದಲಿರಬೇಕು ||

ಆದಿಯಲ್ಲಿ ಪರಬ್ರಹ್ಮನು ತಾನು ಅನುಪಮನದ್ವಯನು |
ಆದಿಯನಾದಿಯಿಂದತ್ತಲತ್ತ ಶಿವಶಕ್ತಿಯೇ ತಾನಾಗಿ ||
ಹನ್ನೆರಡನೆ ಶತಮಾನದಲ್ಲಿ ಗುರುಸಿದ್ಧನು ಅವತರಿಸಿ |
ಘನಮಹಿಮ ನಿರಂಜನ ಜಂಗಮ ಮೂರುತಿಯೆನಿಸಿದನು ||

ಅಪ್ಪನ ವಚನವ ಬಿತ್ತರಿಸಲು ಅವತಾರವಗೈದವನು |
ಪುಷ್ಪವಲ್ಲಿ ಪುರದಲ್ಲಿ ನೆಲಿಸಿ ತಾ ಲೋಕವ ಬೆಳಗಿದನು ||
ಮೂರಸಾವಿರ ಮಠಗಳ ಸ್ಥಾಪಿಸಿ ಚರರನು ಪೊರೆದವನು |
ಮೂರುಸಾವಿರ ಜಂಗಮ ಬಳಗಕೆ ಜಗದ್ಗುರುವೆನಿಸಿದನು ||

ವೀರಶೈವ ಮತ ಧ್ವಜವನು ಎತ್ತಿದ ಷಟ್‌ಸ್ಥಲ ಮೂರುತಿಯು !|
ವೀರವಿರಾಗಿ ಗುರುಸಿದ್ಧೇಶ್ವರ ನಿರಂಜನ ಶ್ರೀ ಪ್ರಭುವೇ ||
ದಿಟ್ಟಿಯಿಂದ ಮೂಜಗವನು ಪೊರೆಯುವ ಶ್ರೇಷ್ಠ ಗುರುವರನು ||
ಪುಟ್ಟ "ಬಸವನ" ಸಲುಹಿದ ಜಗದ್ಗುರು ಗುರುಸಿದ್ಧೇಶ್ವರನು ||

# ಕೈಲಾಸ ವರ್ಣನೆ

ಶಿವನ ವಾಸಸ್ಥಾನವಾದ ಕೈಲಾಸಪರ್ವತವನ್ನು ವರ್ಣಿಸಲು, ಹೊಗಳಲು ಎರಡು ಸಾವಿರ ನಾಲಿಗೆಗಳುಳ್ಳ ಆದಿಶೇಷನಿಗೂ ಅಸಾಧ್ಯ. ಆದರೂ ನಮ್ಮ ಕರ್ನಾಟಕದ ಹೆಸರಾಂತ ಮಹಾ-ಮಹಾ ಕವಿಗಳೂ, ವರಕವಿಗಳೂ, ಆಧುನಿಕ ಕವಿಗಳೂ ಅನಂತ ರೀತಿಯಿಂದ ಹೊಗಳಿದ್ದಾರೆ. ಅವರೆಲ್ಲರ ವರ್ಣನೆಗಳ ಸಾರವನ್ನು ಸಂಕ್ಷಿಪ್ತವಾಗಿ ಕೆಲವೇ ಮಾತುಗಳಲ್ಲಿ ಪರಿಚಯ ಮಾಡಿಕೊಳ್ಳೋಣ:

ಕೈಲಾಸದಲ್ಲಿರುವ ವೃಕ್ಷಗಳೆಲ್ಲವೂ ಕಲ್ಪವೃಕ್ಷಗಳು, ಕಲ್ಲುಗಳೆಲ್ಲ ರತ್ನಗಳು ಅಥವಾ ಚಿಂತಾಮಣಿಗಳು, ಅಲ್ಲಿಯ ಪ್ರವಾಹಗಳೆಲ್ಲವೂ ಅಮೃತ ವಾಹಿನಿ, ಆಕಳುಗಳೆಲ್ಲ ಕಾಮಧೇನುಗಳು, ಅಲ್ಲಿ ಸಂಚರಿಸುವವರೆಲ್ಲರೂ ಖೇಚರರು, ಗಿಡಬಳ್ಳಿಗಳೆಲ್ಲ ಸಂಜೀವಿನಿ.

ಈ ರೀತಿ ಶೋಭಿಸುತ್ತಿರುವ ಕೈಲಾಸದ ಮರದ ತಂಪಾದ ನೆಳಲಿನಲ್ಲಿ ಚಂದ್ರಕಾಂತ ಶಿಲೆಯ ಪೀಠಗಳ ಮೇಲೆ ಮನೋಹರವಾಗಿ ಕುಳಿತು ಹಾಡುವ, ಸವಿ ಮಾತಾಡುವ, ಶೃಂಗಾರಲೀಲೆಯಾಡುವ ಕಿನ್ನರರು, ಕಿಂಪುರುಷರು ಆ ಪರ್ವತ ಪ್ರದೇಶದಲ್ಲಿ ವಿನೋದಪಡುವರು. ಈ ರೀತಿ ಶೋಭಿಸುತ್ತಿರುವ ಆ ರಜತಾದ್ರಿಯ ತುದಿಯಲ್ಲಿ ಅನರ್ಘ್ಯರತ್ನಗಳಿಂದ ರಚಿತವಾದ ಕೊತ್ತಲಗಳೂ, ಅಮೃತದಿಂದ ತುಂಬಿ ಸಮೃದ್ಧವಾದ ಕಾಲುವೆಗಳೂ, ಇಂದ್ರಮಣಿಯ ಹರಳುಗಳಿಂದ ಮಾಡಿದ ಬುರುಜುಗಳುಳ್ಳ ಕೋಟೆಯು ಇರುತ್ತಿರಲು, ಶಿವನ ಆ ಪಟ್ಟಣವು ತನ್ನ ಬಿಳಿಯ ಗೋಪುರದಿಂದ ವಿರಾಜಿಸಿತ್ತು. ಆ ಪಟ್ಟಣ-ವನ್ನುಮಹಾಬಲಶಾಲಿಗಳೆನಿಸಿದ ಅಷ್ಟ ಭೈರವರು ಕಾಯುತ್ತಿರುವ ಪ್ರದೇಶದ ಒಳಗಡೆಗೆ ಆದಿಶೇಷನಿಗೂ ಹೊಗಳಲು ಅಸಾಧ್ಯವೆನಿಸಿದ ಮಹಿಮೆಯನ್ನು ಪಡೆದ, ಅತ್ಯಂತ ಪ್ರಕಾಶಮಾನವಾದ, ಅತ್ಯಂತ ಕೌತುಕಮಯವಾದ, ಅತಿ ವೈಭವೋಪೇತವಾದ, ಬಹಳ ಸುಂದರವಾಗಿದ್ದ ಕಣ್ಣುಗಳಿಗೆ ಮಂಗಳವನ್ನು ಮನಸ್ಸಿಗೆ ಆಕರ್ಷಣೆಯನ್ನೂ ಹುಟ್ಟಿಸುವ ಆ ಶಿವನ ರಾಜಧಾನಿಯು ಕಂಗೊಳಿಸುತ್ತಿತ್ತು.

ಆ ಪಟ್ಟಣದ ಅಧಿಪತಿಯಾಗಿ ಚಿತ್-ಅಚಿತ್‌ಗಳನ್ನು ಪ್ರೇರೇಪಿಸು ವವನೂ, ಅದ್ವಿತೀಯನೂ, ವೇದಾಂತದಿಂದ ಮಾತ್ರ ಅರಿಯಲು ಸಾಧ್ಯ- ವಾಗುವವನೂ, ಕಲೆಗಳಿಗೆ ಆಶ್ರಯಸ್ಥಾನನಾದವನೂ, ಆದಿ-ಅಂತ್ಯಗಳಿಲ್ಲ ದವನೂ, ಪರಮ ಪೂಜ್ಯನೂ, ಜಾಡ್ಯರಹಿತನೂ, ದಯಾಸಮುದ್ರನೂ, ವಿಶ್ವಸ್ವರೂಪನಾದವನೂ, ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣನಾ- ದವನೂ, ವಿಷ್ಣುವೇ ಮೊದಲಾದ ದೇವಗಣಂಗಳಿಂದ ಪೂಜಿಸಲ್ಪಡುವ ಪಾದಾರವಿಂದಗಳುಳ್ಳವನೂ, ಮಹಾಭೋಗಗಳನ್ನೂ-ಮೋಕ್ಷವನ್ನೂ ದಯ ಪಾಲಿಸುವವನೂ ಆದ ಶಂಕರನು ಶೋಭಿಸುತ್ತಿದ್ದಾನೆ. ಈತನು ಭೂತ- ವರ್ತಮಾನ ಭವಿಷ್ಯಗಳ ತೊಂದರೆಗಳನ್ನು ನಿವಾರಿಸುವವನೂ, ಉರಗಾ- ಭರಣನೂ, ವಿದ್ಯಾಶ್ರಯನೂ, (ಸ್ಮಶಾನ) ಭೂದಿಯನ್ನು ಹಚ್ಚಿಕೊಳ್ಳುವ- ವನೂ, ಆ ಶಿವನ ವಾಮ ಭಾಗದಲ್ಲಿ (ತೊಡೆಯ ಮೇಲೆ) ಎಳೆಯ ಚಂದ್ರನಂತೆ ಶೋಭಿತವಾದ ರತ್ನ ಕಿರೀಟ, ರತ್ನಾಭರಣಗಳು, ಚಂದ್ರನಂಥ ಮುಖವು, ಹೊಸ ಅರುಣೋದಯ, ಕಾಂತಿಯ ದೇಹವಿರಲಾಗಿ-ಸರ್ವಮಂಗಳೆಯೂ, ಶುಭಾಂಗಿಯೂ ಆದ ಪಾರ್ವತಿಯು ವಿರಾಜಮಾನ ಆಗಿದ್ದಾಳೆ.

ಈ ಶಿವಪಾರ್ವತಿಯರ ಒಡ್ಡೋಲಗದಲ್ಲಿ ತಾಪಸ ಸಮೂಹವೂ, ಎಡ ಬಲ ಭಾಗಗಳಲ್ಲಿ ಗಣಪತಿ-ಷಣ್ಮುಖರೂ ಶೋಭಿಸುತ್ತಿದ್ದಾರೆ. ಶಿವನ ಮುಂದೆ ಹುರಿಮೀಸೆಯ, ಗಂಭೀರನೂ, ದಕ್ಷಸಂಹಾರಿಯೂ, ಆದ ಅಘಟಿನ ವೀರಭದ್ರ ಸ್ವಾಮಿಯು ಒಪ್ಪಿದ್ದಾನೆ. ಅಲ್ಲದೇ, ಧರ್ಮಸ್ವರೂಪನೂ, ಶಿವಹೃದಯಾಬ್ಜ ಪೀಠನಿಲಯನೂ ಆದ ನಂದೀಶ್ವರನು ಪ್ರಕಾಶಿಸುತ್ತಿದ್ದಾನೆ. ಇವರುಗಳಲ್ಲದೆ ಲಕ್ಷ್ಮೀನಾರಾಯಣರೂ, ಕಮಲಸಂಭವನೂ, ಸರಸ್ವತೀ ದೇವಿಯೂ ಇವರುಗಳಲ್ಲದೆ ಅಷ್ಟದಿಕ್ಪಾಲಕರು, ನವಗ್ರಹ ದೇವತೆಗಳೂ, ಮನು- ಮುನೀಂದ್ರ ಗಣಕುಲ ಸಮಸ್ತರೂ, ಸಿದ್ಧವಿದ್ಯಾಧರರೂ, ಖೇಚರರೂ, ಶೋಭಿಸುತ್ತಿದ್ದಾರೆ. ಸುರಪನೇ ಮೊದಲಾದ ದೇವಾನುದೇವತೆಗಳು ಶಿವನ ಸ್ತುತಿಸುತ್ತಿದ್ದಾರೆ; ಭೃಂಗೀಶನ ನಾಟ್ಯ ವಿವಿಧ ಭಂಗಿಯಲ್ಲಿ ಆಕರ್ಷಣೀಯ- ವಾಗಿದೆ. ಈ ರೀತಿ ಕಡಲಿನೋಪಾದಿಯಲ್ಲಿ ಆನಂದ ಉಕ್ಕೇರಿ ಸಭೆಯು ಪ್ರಕಾಶಿಸುತ್ತಿರಲು, ಆ ಸಮಯಕ್ಕೆ ಅಂಬರಮುನಿಯಾದ ದೇವಋಷಿ ನಾರದರು ಶಿವನಾಮ ಸಂಕೀರ್ತನೆ ಮಾಡುತ್ತಾ ಆಗಮಿಸಿದ್ದಾರೆ. ನಾರದರು

ಪರಶಿವನ ಪಾದಪದ್ಮಂಗಳಲ್ಲಿ ಸಾಷ್ಟಾಂಗ ನಮಸ್ಕಾರವಂ ಮಾಡಿ, ಖಿನ್ನವದನರಾಗಿ ಮುಂದೆ ನಿಂತಿರಲು ಪರಮೇಶ್ವರನು ಕಂಡು ನಾರದರನ್ನು ಈ ರೀತಿ ಕೇಳುತ್ತಾನೆ.

**ಶಂಕರ:**–ನಾರದರೇ ! ನೀವು ಈ ರೀತಿ ಖಿನ್ನವದನರಾಗಿರುವ ಕಾರಣವೇನು ? ಈಗ ಎಲ್ಲಿಂದ ಬರೋಣವಾಯ್ತು? ಇಲ್ಲಿಗೆ ಬಂದ ಕಾರಣವೇನು? ಭೂಲೋಕದ ವಿಶೇಷ ವಾರ್ತೆಯೇನಾದರೂ ಇದೆಯೇ ?

**ನಾರದ:**— ದೇವಾ! "ಭೂಲೋಕದ ಸ್ಥಿತಿ-ಗತಿಗಳನ್ನು ನಾನು ಏನೆಂದು ಹೇಳಲಿ! ಹೇಗೆಂದು ಹೇಳಲಿ !! ಯಾವ ರೀತಿಯಿಂದ ಬಿನ್ನವಿಸಿಕೊಳ್ಳಬೇಕೆಂಬುದೇ ನನಗೆ ತೋಚದಂತಾಗಿದೆ. ಮರ್ತ್ಯಲೋಕವು ಲೋಕ ಬಾಹಿರರಾಟದಿಂದ ಖಿಲವಾಗುತ್ತಿದೆ; ತೇಜೋಹೀನವಾಗಿದೆ. ಎಲ್ಲೆಲ್ಲೂ ಮಾಯಾಸಕ್ತರೂ, ಜಾರರೂ, ಚೋರರೂ, ಕುಹಕಿಗಳೂ, ಕಪಟಿಗಳೂ, ಹೆಚ್ಚಾಗಿ ಅಧರ್ಮ, ಅತ್ಯಾಚಾರ,ಅನೀತಿ, ಅಶಾಂತಿ, ತಾಂಡವವಾಡುತ್ತಿವೆ. ಕೆಲವರು ಧರ್ಮದ ಹೆಸರಿನಿಂದ ಅನೇಕ ಸುಳ್ಳು ವೇದಾಂತಗಳನ್ನು ಆಚರಣೆಗೆ ತಂದು, ಜನರನ್ನು ತಪ್ಪುದಾರಿಗೆಳೆಯುತ್ತಿದ್ದಾರೆ.ಇದಲ್ಲದೆ ವ್ಯಕ್ತಿ-ವ್ಯಕ್ತಿಗಳಲ್ಲಿ, ಧರ್ಮ ಧರ್ಮಗಳಲ್ಲಿ, ಮತ-ಮತಗಳಲ್ಲಿ ಘರ್ಷಣೆಯುಂಟಾಗಿ ಅಲ್ಲೋಲ ಕಲ್ಲೋಲವಾಗುತ್ತಿದೆ.ಈ ಮಧ್ಯೆ ನಿಜವಾದ ಧರ್ಮವು ಅವನತಿಹೊಂದುತ್ತಿದೆ. ನೀತಿ ಧರ್ಮಗಳು ಶಿಥಿಲವಾಗಿವೆ. ಆದ್ದರಿಂದ, ಭೂಲೋಕದ ಸಮಸ್ತ ಮಾನವರ ಕಲ್ಯಾಣಕ್ಕಾಗಿ ಹಾಗೂ ಶಿವಧರ್ಮದ ಜ್ಯೋತಿಯನ್ನು ಬೆಳಗಿಸುವುದಕ್ಕಾಗಿ ನಿನ್ನ ನಿರಂಜನ ಸ್ವರೂಪವನ್ನು ಧರೆಗೆ ಕಳುಹಿಸಿ ಜಗದ ಜನರನ್ನೂ ಉದ್ಧರಿಸಬೇಕೆಂದು ಪ್ರಾರ್ಥಿಸುತ್ತೇನೆ" ಎಂಬುದಾಗಿ ಬಿನ್ನವಿಸಿಕೊಂಡರು.

**ಶಿವ:**— ನಾರದ ಮುನಿಗಳೇ ! ನೀವು ಹೇಳುವುದೆಲ್ಲಾ ನಿಜ. ಈ ಎಲ್ಲಾ ವಿಷಯಗಳನ್ನು ನಾವು ಅರಿತಿದ್ದೇವೆ. ಇದಕ್ಕಾಗಿ ಒಂದು ಪರಿಹಾರ ಮಾರ್ಗವನ್ನು ಕಂಡುಹಿಡಿದಿದ್ದೇವೆ.

**ನಾರದ:**—ಪರಮಸಂತೋಷವಾಯಿತು ಪರಮಾತ್ಮ ! ಆ ಪರಿಹಾರ ಮಾರ್ಗವೇನೆಂಬುದನ್ನು ಕೃಪೆಮಾಡಿ ಅಪ್ಪಣೆ ಕೊಡಿಸಬೇಕು.

**ಶಿವ:**—ಮತ್ತೇನು, ಅದೇ ನೀವು ಅರಿಕೆಮಾಡಿಕೊಂಡಂತೆ ಭೂಲೋಕದಲ್ಲಿ ಅವತಾರಗೈವುದೊಂದೇ ಮಾರ್ಗ.

**ನಾರದ:**—ಬಹಳ ಸಂತೋಷ, ಕೃಪೆಮಾಡಿ ಅವತಾರ ವಿಷಯವನ್ನು ವಿವರವಾಗಿ ನಿರೂಪಿಸಬೇಕಾಗಿ ಪ್ರಾರ್ಥನೆ.

**ಶಿವ:**—ಧರ್ಮ ಸ್ವರೂಪನಾದ ನಂದೀಶ್ವರನಿಗೆ ಈ ಜವಾಬ್ದಾರಿಯನ್ನು ಒಪ್ಪಿಸಿದ್ದೇವೆ. ನಂದೀಶ್ವರನೇ ಭೂಲೋಕದಲ್ಲಿ ಅವತರಿಸಿ ಶಿವಧರ್ಮವನ್ನು ಸಮುದ್ಧಾರಗೈಯ್ಯುತ್ತಾನೆ.

**ನಾರದ:**—ಪರಮಾತ್ಮ! ನಂದೀಶ್ವರನ ಅವತಾರವನ್ನು ಕೇಳಿ ನನಗೆ ಪರಮ ಸಂತೋಷವಾಯಿತು. ಆದರೆ, ಭೂಲೋಕದ ಈಗಿನ ಸ್ಥಿತಿಗತಿಯನ್ನು ನೋಡಿದರೆ ಕೇವಲ ನಂದೀಶ್ವರನೊರ್ವನಿಂದಲೇ ಈ ಕಾರ್ಯವು ಅಸಾಧ್ಯವೆಂದು ನನಗನಿಸುತ್ತದೆ.

**ಶಿವ:**—ನಾರದರೇ! ಇನ್ನೂ ನಿಮಗೆ ನಂದೀಶ್ವರರ ಮಹಿಮೆ ತಿಳಿದಿಲ್ಲವೆ? ಜಗತ್ತನ್ನೆಲ್ಲಾ ಬೆಳಗಲು ಒಬ್ಬ ಸೂರ್ಯನು ಸಾಲದೇ ಹಲವಾರು ಸೂರ್ಯರ ಅವಶ್ಯವಿದೆಯೇ?

**ನಾರದ:**— ಕ್ಷಮಿಸಬೇಕು ಪರಮಾತ್ಮ! ಭೂಲೋಕದಲ್ಲಿ ಮಾನವರಾಗಿ ಅವತಾರ ತಾಳಿದ ನಂತರ, ಮಾನವರಂತೆ ಮಾನವ ಶಕ್ತಿಗೆ ತಕ್ಕಂತೆ ಆಚರಿಸಿ, ಜಗದೋದ್ಧಾರ ಗೈದು ಜಗದ ಮಾನವರಿಗೆ ಮಾರ್ಗದರ್ಶನಮಾಡಬೇಕಲ್ಲವೇ? ಅಂದಮೇಲೆ, ಇದೊಂದು ನಾಟಕವೇ ಆಗುವುದಿಲ್ಲವೇ? ಇಂಥಹ ಬೃಹತ್ ನಾಟಕಕ್ಕೆ ಏಕಪಾತ್ರಾಭಿನಯವು ಸಮಂಜಸವಾಗುವದಿಲ್ಲ. ಕೈಲಾಸದ ಪ್ರತಿಯೊಬ್ಬರಿಗೂ ಒಂದೊಂದು ಪಾತ್ರವನ್ನು ವಹಿಸಿಕೊಟ್ಟು, ನಂದೀಶ್ವರನನ್ನು ನಾಟಕದ ನಾಯಕನನ್ನಾಗಿ ಮಾಡಿದರೆ ಬಹಳ ಚೆನ್ನಾಗಿರುತ್ತದೆ.

**ಶಿವ:**—ಶಹಬಾಷ್! ನಾರದರೇ, ನೀವು ಒಳ್ಳೆಯ ನುರಿತವರೇ ಅಲ್ಲವೇ? ನಿಮ್ಮ ಮಾತು ಸತ್ಯವಾದುದು. ನಿಮ್ಮ ಅಭಿಪ್ರಾಯದಂತೆ ಇಡೀ ಕೈಲಾಸದವರೆಲ್ಲಾ ಭೂಲೋಕದಲ್ಲಿ ಅವತಾರಗೈಯ್ಯುವಂತೆ ಈಗಾಗಲೇ ನಾವು ಅಪ್ಪಣೆಕೊಡಿಸಿದ್ದಾಗಿದೆ.

**ನಾರದ:**—ಪರಮಾತ್ಮ! ನನ್ನ ಆನಂದಕ್ಕೆ ಪಾರವೇ ಇಲ್ಲದಂತಾಯಿತು; ಬಹಳ ಸಂತೋಷ, ಬಹಳ ಸಂತೋಷ. ಆದರೆ ಯಾರು-ಯಾರು, ಯಾವ-ಯಾವ ಅವತಾರವನ್ನು ತಾಳುವರೆಂಬುದನ್ನು ಕೃಪೆಮಾಡಿ ಅಪ್ಪಣೆ ಕೊಡಿಸಬೇಕಾಗಿ ಪ್ರಾರ್ಥನೆ.

**ಶಿವ:**—ನಾರದರೇ, ನಂದೀಶ್ವರನೇ ಬಸವೇಶ್ವರನಾಗಿಯೂ, ಪಾರ್ವತಿಯ ಸಾತ್ವಿಕಳೆಯೇ ಅಕ್ಕಮಹಾದೇವಿಯಾಗಿಯೂ, ವೀರಭದ್ರನೇ ಮಡಿವಾಳ ಮಾಚಿದೇವನಾಗಿಯೂ, ಭೃಂಗಿಯೇ ಬಹುರೂಪಿ ಚೌಡಯ್ಯನಾಗಿಯೂ, ಷಣ್ಮುಖನೇ ಚೆನ್ನಬಸವಣ್ಣನಾಗಿಯೂ, ಉಳಿದ ಎಲ್ಲಾ ಗಣಸಮೂಹವು ಶಿವಶರಣರಾಗಿಯೂ ಅವತರಿಸುತ್ತಾರೆ.

**ನಾರದ:**—ಪರಮಾತ್ಮ ! ಕೈಲಾಸದಲ್ಲಿರುವ ಎಲ್ಲರ ಅವತಾರ ಕಾರ್ಯವನ್ನೂ ನಿರ್ಧರಿಸಿದ್ದಾಯಿತು. ಆದರೆ, ಮುಖ್ಯವಾಗಿ ತಮ್ಮ ಪಾತ್ರವೇನೆಂಬುದನ್ನೇ ತಿಳಿಸಲಿಲ್ಲವಲ್ಲ; ಕೃಪೆಮಾಡಿ ತಮ್ಮ ಅವತಾರದ ಬಗ್ಗೆ ತಿಳಿಸಬೇಕಾಗಿ ಪ್ರಾರ್ಥನೆ.

**ಶಿವ:**—ಪೂಬಳ್ಳಿಯಲ್ಲಿ ಗುರುಸಿದ್ಧೇಶ್ವರರ ನಾಮದಿಂದ ಪ್ರಕಟವಾಗಿ, ಶಿವಧರ್ಮದ ಉದ್ಧಾರಗೈಯ್ಯುತ್ತೇನೆ.

# ಬನ್ನಿರೆಂದ ಗುರುಸಿದ್ಧೇಶ್ವರನಿಗೆ★

ರಾಗ : ಸಾರಂಗ (ಬಿಹಾಗ); ತಾಳ : ಆದಿತಾಳ

ಬನ್ನಿರೆಂದ ಗುರುಸಿದ್ಧೇಶ್ವರನಿಗೆ |
ಸನ್ನುತಿ ಸಲ್ಲಿಸಿ ನಮಿಸೋಣ ||ಪಲ್ಲವಿ||

ಕೈಲಾಸಿಗರೇ ! ನೀವ್ ಸಜ್ಜಾಗಿರಿ; |
ಭೂ-ಲೋಕಕಿರಲು ಹೊರಡೋಣ ||
ಮೂಲೋಕದ ಸಿರಿ : ಭೂಲೋಕವನೇ |
ಕೈಲಾಸದವೋಲ್ ಮಾಡೋಣ|| ಬನ್ನಿರೆಂದ.... ||೧||

ಭಾರತ ರಾಷ್ಟ್ರದ ಕರ್ನಾಟಕದಲಿ |
ಮೂರು ಸಾವಿರ್‌ಮಠ ಕಟ್ಟೋಣ ||
ತೋರಿದ ತಾಣಕೆ ಹುಬ್ಬಳ್ಳಿ ಹೆಸರ |
ಸಾರುತ ಊರನು ಕಟ್ಟೋಣ || ಬನ್ನಿರೆಂದ.... ||೨||

ಶ್ರೀಕೈಲಾಸವ ಬದಲಿಸಿ ಭೂ-ಶಿವ- |
ಲೋಕವ ಸಾರ್ಥಕ ಮಾಡೋಣ ||
ಏಕೀಕೃತ ಭೂ-ರುದ್ರರ ನೆರವಿಗೆ |
ಭೂ-ಕೈಲಾಸವ ಮಾಡೋಣ || ಬನ್ನಿರೆಂದ.... ||೩||

ವೀತನದ ಶಿವ : ನಾ : ನನ್ನನು ಜನ |
ಕೋರುತ ಪೂಜಿಸಲೆನ್ನೋಣ ||
ವೀರ ವಿರತಿ-ಯುತ ಸಾತ್ತ್ವಿಕ ಜನತೆಗೆ |
ವೀರ-ಶೈವರವರೆನ್ನೋಣ || ಬನ್ನಿರೆಂದ.... ||೪||

ಶ್ರೀಗುರು, ಲಿಂಗವು, ಜಂಗಮ ಮೂವಿಧ- |
ವಾಗಿಹ ನಾ : ಶಿವ ಎನ್ನೋಣ ||
ಶ್ರೀಗುರುಸಿದ್ಧನೆನುವ ಮಮ ನಾಮಕೆ |
ಶ್ರೀ "ಗುರುಮೂರ್ತಿ"ಯೆ ಎನ್ನೋಣ || ಬನ್ನಿರೆಂದ.... ||೫||

# ಕೈಲಾಸದಲ್ಲಿ ಸುದ್ದಿ

ತಾಳ . ಕವಾಲಿ

ಚಾಲ: "ಕೌನ ಪರದೇಶಿ ಮೇರಾ ದಿಲ್ ಲೇ ಗಯಾ......" ಎಂಬಂತೆ.

**[ ಕೈಲಾಸದಲ್ಲಿ ]**

ಕೈಲಾಸದಲಿ ಸುದ್ದಿ ತಾ ಹಬ್ಬಿರುವುದಲ್ಲ : |
"ಕೈಲಾಸ-ಪತಿ : ಶಿವನು ಕೈಲಾಸದಲ್ಲಿಲ್ಲ!" ||ಪಲ್ಲವಿ||

'ದೇವಾದಿ-ದೇವ; ಗುರು ನೆಲೆಸಿರುವನೆತ್ತ ?' :
'ದೇವತೆಗಳೆಲ್ಲರೂ ನೋಡಿದರು ಸುತ್ತ' ||೧||

ಮೂಲೋಕ-ಸಂಚಾರಿ : ಚರ ನುಡಿದನಿಂತೆಂದು:-|
"ಭ್ರೂಲತಾ-ಪುರ...ಹುಚ್ಚ...ಗುರುಸಿದ್ಧ—ಇಂದು... ||೨||

ಆ-ಲೋಕ...ನಿರ್ವಿಕಲ್ಪ...ಸಮಾಧಿ ಶುಭ....ಮುಂದು,.|
ಭೂ-ಲೋಕ...ಹೂಬಳ್ಳಿ...ಮಠ...ನೋಡಿ"ರೆಂದು ||೩||

'ಕೈಲಾಸವಿದು ದಿವ್ಯ : ಶಿವಗೆ ಬೇಡಾಯಿತೇ ? ।
ಭ್ರೂಲತಾ-ಪುರ-ವಾಸ ಮಿಗಿಲಾಯಿತೇ ?' । ॥೪॥

'ಭೂಲೋಕದೋಳ್ ಭವ್ಯ, ಭ್ರೂಲತಾಪುರವಂತೆ' ।
'ಭ್ರೂಲತಾ-ಪುರದರ್ಥ ಹುಬ್ಬಳ್ಳಿಯಂತೆ' । ॥೫॥

'ಹುಬ್ಬಳ್ಳಿಯಲಿ ಶಿವನ ವಾಸವೆಲ್ಲಿದೆಯಂತೆ?' ।
'ಹಬ್ಬಿರುವ ಮೂರುಸಾವಿರಮಠವಂತೆ' ॥೬॥

'ಮೂರು ಸಾವಿರ ಮಠಕೆ ಯೋಗಾರ್ಥ ಏನಂತೆ ?' ।
'ಮೂರು ಸಾವ್ರೂ ಇರದವ್ರೋಲ್ ಮಾಳ್ಪುದಂತೆ' ॥೭॥

'ಈ ಮಠಕೆ ನಿಜವಿರುವ ರೂಢ್ಯಾರ್ಥ ಏನಂತೆ ?' ।
'ಆ ಮೂರು ಸಾವಿರ ವಿರತರಿಹರವರಂತೆ' ॥೮॥

'ಆ ವಿರತ-ಗಣಕೆಲ್ಲ ಕೇಂದ್ರ ಈ ಮಠವಂತೆ' ।
'ಆ ವಿರತ-ಮಠದಧಿಪ ಗುರುಸಿದ್ಧನಂತೆ' ॥೯॥

'ಗುರುಸಿದ್ಧ ಶಿವನಿಗೇ ಹುಚ್ಚನೆನ್ನುವರಂತೆ' ।
'ಗುರುಸಿದ್ಧ : ಸಿದ್ಧ ಗುರು : ಗುರು-ಸಿದ್ಧನಂತೆ' । ॥೧೦॥

'ಹರಗೆ ಭೂಲೋಕದಲಿ ಗುರುಸಿದ್ಧ ಹೆಸರಂತೆ' ।
'ಗುರುಸಿದ್ಧನೇ ಜಗದ್‌ಗುರು ಹುಚ್ಚನಂತೆ' ॥೧೧॥

'ಹುಚ್ಚನೆಂದರೆ ನಿರ್ವಿಕಾರಿ : ಯತಿ : ಮುನಿಯಂತೆ' ।
'ಮೆಚ್ಚಿದವರಿಗೆ ಎಲ್ಲ ವರ ಕೊಡುವನಂತೆ' ॥೧೨॥

'ಹುಬ್ಬಳ್ಳಿ ಊರೊಂದೆ ವಾಸವಾಗಿರದಂತೆ' ।
'ಹುಬ್ಬಳ್ಳಿ ಮುಖ್ಯ, ನಿಜ; ಜಗ ತುಂಬವಂತೆ' ॥೧೩॥

'ಮೂರು ಸಾವಿರ ಶಿಷ್ಯರೊಂದೊಂದು ಮಠಕಂತೆ' ।
'ಮೂರು ಸಾವಿರ ಶಾಖೆ : ಮಠವಿರುವವಂತೆ' ॥೧೪॥

'ಅದಕೆಂದೆ ಮೂರು ಸಾವಿರ ಭಾಗಕಿಹರಂತೆ' ।
'ಅದಕಿರುವ ಜರ್ರವಕೆ, ಅಧ್ಯಕ್ಷರಂತೆ' ॥೧೫॥

'ಯಾವತ್ತು ಮೂರು ಸಾವಿರ ವಿರತರೇನಂತೆ' ? |
'ಮೂವತ್ತು+ಮೂರ್ ಕೋಟಿ ದೇವರವರಂತೆ' ||೧೬||

'ಗಣದೊಡೆಯ ಗಜ-ಮುಖನ ಸ್ಥಿತಿ-ಗತಿಯು ಏನಂತೆ?' |
'ಗಣಪತಿಯೆ ನಿಜದಲಿ "ಗಣೇಶ" ಗಜವಂತೆ' ||೧೭||

'ತಾನಾಗಿ ಹರಿವ ಗಂಗಾ-ಸ್ಥಿತಿಯು ಏನಂತೆ ?' |
'ತಾನೆ ಬಾವಿ-ಸೆಲೆ ಜಲವಾಗಿರುವಳಂತೆ' ||೧೮||

'ಗೌರಿಗಿರುವಿಕೆ: ಗೌರವದ ತಾಣ ಎಲ್ಲ್ಯಂತೆ' |
'ಗೌರಿ ತಾ "ಲಕ್ಷ್ಮಿ-ಕಂಬವು" ಆದಳಂತೆ' ||೧೯||

'ಶೃಂಗಾರ-ಸಂಕೇತ ತರು-ಶಿಲ್ಪ ಎಲ್ಲ್ಯಂತೆ? ' |
'ಶೃಂಗಾರ-ಮೂರ್ತಿ-ಯುತ ಹಳೆಯತೇರಂತೆ' ||೨೦||

'ವೇದೋಪನಿಷದಾದಿ ಅಧ್ಯಯನ ಎಲ್ಲ್ಯಂತೆ? ' |
'ವೇದ ಜ್ಯೋತಿಷ್ಯ ಸಂಸ್ಕೃತ ಶಾಲೆಯಂತೆ' ||೨೧||

'ತಾತ್ತ್ವಿಕ ವಿವೇಚನೆಯ ತಾಣವದು ಎಲ್ಲ್ಯಂತೆ ? ' |
'ಸಾತ್ವಿಕ ನೆಲೆ ಶಿವಾನುಭವ ಮಂಟಪಂತೆ' ||೨೨||

'ಶಾಸ್ತ್ರ ಪುಸ್ತಕದ ಪ್ರತಿ-ಲೇಖಕನು ಯಾರಂತೆ? ' |
'ಶಾಸ್ತ್ರೀಯ ಶ್ರೀ 'ಪರಂಜ್ಯೋತಿ-ಮುದ್ರಣಂ'ತೆ" ||೨೩||

'ಅಕ್ಷತೆಯ ಸುರಿಮಳೆಯ ನೆಲೆ ಯಾವುದಂತೆ? ' |
'ರಕ್ಷಿಸಿದ ಕಲ್ಯಾಣ-ಮಂಟಪದೊಳಂತೆ' ||೨೪||

'ಮುಖ್ಯ ಕೇಂದ್ರಿಯ ಕಾರ್ಯಾಲಯವು ಎಲ್ಲ್ಯಂತೆ? ' |
'ಮುಖ್ಯ ಮಠದ ಸಮೀಪದಲ್ಲಿರುವುದಂತೆ' ||೨೫||

'ಗದ್ದಿಗೆಯ ರೂಪಿ ಶಿವನ ಸರ್ಪ ಧರಿಸಿಲ್ಲಂತೆ' |
'ಗದ್ದಿಗೆಯ ಹಿಂದದು, ಗೃಹದೊಳಿರಬಹುದಂತೆ' ||೨೬||

'ಇಲ್ಲಿ ಗಜ. ಚರ್ಮಾಂಬರನು ಅಲ್ಲಿ ಏನಂತೆ? " |
'ಅಲ್ಲಿ ಧರಿಸಿದ್ದು ಕಾವಿಯ ವಸ್ತ್ರವಂತೆ' ||೨೭||

'ಇಲ್ಲಿ ಧರಿಸಿರುತಿರ್ದ ಆ ತ್ರಿಶೂಲೇನಂತೆ?' |
'ಅಲ್ಲಿ ಅದು ಬೆತ್ತವಾಗಿರುವುದಂತೆ' ||೨೮||

'ಮಂದಾರ ಮಲ್ಲಿಗೆ ಕುಸುಮಗಳಿಲ್ಲಿಯವಂತೆ?' |
'ಸುಂದರ ಕುಮಾರೋದ್ಯಾನ-ವನದವಂತೆ' ||೨೯||

'ಕಲ್ಪಿಸಿದ ವರ ಕೊಡುವ ತರು ಯಾವುದಂತೆ?' |
'ಕಲ್ಪ-ತರು: ಶಮಿ ಬಿಲ್ವ-ಪತ್ರಿ ಗಿಡವಂತೆ' ||೩೦||

'ರುದ್ರಾಕ್ಷ.ಭಸ್ಮಾದಿಗಳ ಪ್ರಾಪ್ತಿ ಎಲ್ಲ್ಯಂತೆ?' |
'ಭದ್ರತೆಯ ಒಳ ಮಹಾದ್ವಾರ ಬಳಿಯಂತೆ' ||೩೧||

'ರಜತ-ಗಿರಿ-ಹೇಮಾದ್ರಿ-ಪ್ರತಿರೂಪ ಎಲ್ಲ್ಯಂತೆ?' |
'ರಜತ-ಹೇಮದ ಪೀಠ: ಸಿಂಹಾಸನಂತೆ' ||೩೨||

'ಓಂಕಾರ ದನಿಗೈವ ಗಾಯಕರು ಯಾರಂತೆ?' |
'ಝೇಂಕಾರ-ರವಗೈವ ಜೇನ್ನೊಣಗಳಂತೆ' ||೩೩||

'ಅನ್ನಪೂರ್ಣೆಯು ಅನ್ನ ನೀಡುವುದು, ಎಲ್ಲ್ಯಂತೆ?' |
'ಅನ್ನ ನೀಡುವ ಸ್ಥಾನ ದಾಸೋಹವಂತೆ' ||೩೪||

'ಸಂಪತ್ತಿನ ಕುಬೇರ-ನಿಧಿಯು ಎಲ್ಲಿದೆಯಂತೆ?' |
'ಸಂಪತ್ತಿರುವ ಖೋಲಿ "ಗುರುಮಠ"ದ ಮುಂದಂತೆ ||೩೫||

'ವರ-ಪುಷ್ಪಕದ ನಾಮಗಳು ಏನು, ಏನಂತೆ?' |
'ಹೊರುವ ಪಲ್ಲಕ್ಕಿ ಮೇಣ್ ಮೇಣೆ, ರಥವಂತೆ' ||೩೬||

'ರಥವು ತಾ ನೆಲಬಿಟ್ಟು, ಗಗನಕೆ ಜಿಗಿಯದಂತೆ'
'ರಥಿಕ-ಕೃತ-ಸಂಜ್ಞೆಯಿಂ ನಡೆಯುತಿಹುದಂತೆ' ||೩೭||

‘ನಂದಿನಿ ಕಪಿಲೆಯಂಥ ಗೋಮಾತೆ ಏಕಂತೆ ?’ |
‘ಕುಂದದರ್ಚನೆ ಹಾಲಿಗಾಗಿ ಬೇಕಂತೆ’ ||೩೮||

‘ಷಣ್ ಮುಖದ ಸೇನಾನಿ ಏನು ಮಾಡುವನಂತೆ?’ |
‘ಷಣ್ “ಮಂಜಿಲ”ದ ಮಹಾ-ದ್ವಾರ ಅವನಂತೆ’ ||೩೯||

‘ಅಪ್ಪಣೆಗೆ ಕಾಯುತಿಹ ಪ್ರತಿಹಾರಿ ಯಾರಂತೆ?’ |
‘ತಪ್ಪದಲೆ ಇರುತಿರುವ ದೃಢ-ಕಾಯನಂತೆ’ ||೪೦||

‘ಪ್ರಮಥ-ವೃಂದಕ್ಕೆ ಹೆಸರು ಮಠದಲ್ಲಿ ಏನಂತೆ ?’ |
‘ಅಮಿತ ಗುಣ ಶಿವಯೋಗಿಗಳ ಸಂಘವಂತೆ’ ||೪೧||

‘ಜ್ಞಾನ-ಕೃತಿ-ನಿರ್ಣಯಕೆ ಮುಖ್ಯ ಕೃತಿ ಏನಂತೆ?’ |
‘ಜ್ಞಾನ-ನಿಧಿ ‘ಚಿತ್ಸುಮನ’ ಸಂಕಲನವಂತೆ’ ||೪೨||

‘ಕೃತಿ ಕರ್ತನಂಥ ಕವಿ-ಹೃದಯ ಹೆಚ್ಚಿನದಂತೆ’
‘ಗತಿ, ಕೀರ್ತಿ ಮೂರ್ ಲೋಕ ಮೀರಿರುವುದಂತೆ’ ||೪೩||

‘ಮೂರು ಲೋಕದ ಶಬ್ದ ಕಿಹ ಬಳಕೆ ಏನಂತೆ?’ |
‘ಮೂರು ಹಂತದ ಕಟ್ಟಡದ ಮಠಕೆ ಸರಿಯಂತೆ’ ||೪೪||

‘ಪಾರಮಾರ್ಥಿಕ ಜ್ಞಾನ ಗುರುಪೀಠ ಎಲ್ಲ್ಯಂತೆ ?’ |
‘ಮೂರು ಸಾವಿರ ಮಠದ ಗರ್ಭ ಗುಡಿಯಂತೆ’ ||೪೫||

‘ಆ ಗುಡಿಯು ಶಿವ ಪೀಠ ಶುಭ ಹೆಸರೇನಂತೆ?’ |
ಶ್ರೀ ಗಿರಿಶ ಗುರುಸಿದ್ಧನ ಸಮಾಧಿಯಂತೆ’ ||೪೬||

‘ಪೂರ್ಣತ್ವ ಗತಿ ಮಹಿಮೆ ತಿಳಿಸುವುದು ಏನಂತೆ ?’ |
‘ಪೂರ್ಣತೆಯ “ಗುರುಮೂರ್ತಿ”-ಕೃತ-ಸ್ಫೂರ್ತಿಯಂತೆ’ ||೪೭||

---

* ‘ಬನ್ನಿರೇದ ಗುರುಸಿದ್ಧೇಶ್ವರನಿಗೆ’ ಹಾಗೂ ‘ಕೈಲಾಸದಲ್ಲಿ ಸುದ್ದಿ’ ಈ ಎರಡು ಪದ್ಯಗಳನ್ನು ‘ಗುರುಸಿದ್ಧೇಶ್ವರ ಭಕ್ತಿ ಗೀತಗಳು’ ಎಂಬ ಗ್ರಂಥದಿಂದ ಆಯ್ದು ಕೊಂಡಿದೆ.

—ರಚಿಸಿದವರು : ಡಾ|| **ಗುರುಸಿದ್ಧದೇವ ರಾಜಗುರು ಹಿರೇಮಠ, ಕೆಳದಿ**



# ಕರ್ತೃ ಜ. ಗುರುಸಿದ್ಧೇಶ್ವರ ಅವತಾರ

## ಕರ್ನಾಟಕದ ಹಿರಿಮೆ :

ಭಾರತದ ಹೃದಯದಂತಿರುವ ಕರ್ನಾಟಕದ ಹಿರಿಮೆ ಅವರ್ಣನೀಯವೂ, ಅಸಾಧಾರಣವಾದುದೂ ಆಗಿದೆ.

ಪಕ್ಕಿಗಳ ಪಾಡು, ಹಳ್ಳ-ಹೊಳೆಗಳ ಜೋಡು
ಬಳ್ಳಿ ಹೂ-ಗಿಡಗಳ ಜಾಡು;
ಸಾಗುವ ಸಾರಿಗೆಗಳ ಸರಸಾಡು
ಸಾಹಿತ್ಯದ ಸೂಡು :
ಸಂಗೀತಜ್ಞರ ಶ್ರೀಬೀಡು
ಮಹಾ ಮಹಿಮರ ಮಲೆನಾಡು;
ಒಲುಮೆಯ ನಾಡು,
ನಿಲುಮೆಯ ನಾಡು.
ಬಲುಮೆಯ ನಾಡು.
ಕನ್ನಡ ನಾಡು. **( ಜೀವನ ಕವಿ )**

ಸಾರಲಿಂತಿಹ ಭರತಖಂಡದ
ಸಾರತರದೇಶಗಳ ಮಧ್ಯದೆ
ಸಾರವತ್ತರವಾಗಿ ಕರ್ನಾಟಕವು ಮೆರೆದಿಹುದು
ತೋರುತಿಹುವಿಲ್ಲೆಲ್ಲ ಬೆಳೆಗಳು
ಸಾರುತಿಹುವಿಲ್ಲೆಲ್ಲ ಕಲೆಗಳು
ಸೇರುತಿಹುವಿಲ್ಲೆಲ್ಲ ಫಲಗಳಿದಕೆಣೆಯಾರು.

**( ಶಿವಬಸವ ಪುರಾಣ )**

ಕಣಕದ ಕಡಬಾಗಿ, ಮಣಕೆಮ್ಮೆ ಹಯನಾಗಿ
ಕುಣಿ-ಕುಣಿದು ಮಜ್ಜಿಗೆ ಕಡೆವ ಸತಿಯಾಗಿ ಒಪ್ಪಿದ
ಕರ್ನಾಟಕದ ಅಣಕ ನೋಡೆಂದ ಸರ್ವಜ್ಞ.

ಸೂರ್ಯನುದಯ ತಾವರೆಗೆ ಜೀವಾಳ;
ಚಂದ್ರನುದಯ ನೈದಿಲೆಗೆ ಜೀವಾಳ,
ಕೂಪರ ಠಾವಿನಲ್ಲಿ ಕೂಟ ಜೀವಾಳ,
ಕೂಡಲಸಂಗನಶರಣಬರವೆನಗೆ ಪ್ರಾಣ ಜೀವಾಳವಯ್ಯಾ.

ಇಂಥಹ ಪವಿತ್ರವೂ, ಮಹತ್ತ್ವವೂ ಆದ ಕರ್ನಾಟಕವಲ್ಲಿ, ಹನ್ನೆರಡನೆಯ ಶತಮಾನದಲ್ಲಿ "ಪೂಬಳ್ಳಿ" ಎಂಬ ಗ್ರಾಮವು ಸುಪ್ರಸಿದ್ಧವಾಗಿತ್ತು. (ಈಗಿನ ಹುಬ್ಬಳ್ಳಿ) ಆಗ ಇದು ಪುಟ್ಟ ಗ್ರಾಮವಾದರೂ, ನಿಸರ್ಗ ಸೌಂದರ್ಯದಿಂದೊಡಗೂಡಿದ ಒಂದು ಸುಂದರವಾದ ಗ್ರಾಮವಾಗಿತ್ತು. ಇಲ್ಲಿ ತೆಂಗು, ಮಾವು, ದಾಡಿಂಬೆ, ಹಲಸು ಮೊದಲಾದ ಮರಗಳ ಸಮೂಹದಿಂದ, ಅನೇಕ ತರದ ಹಣ್ಣು-ಹೂಗಳ ತೋಟಗಳಿಂದ, ಕೆರೆ-ಭಾವಿ-ಹಳ್ಳಗಳಿಂದ, ಫಲವತ್ತಾದ ಭೂಮಿಯಿಂದ, ಸಮೃದ್ಧವಾದ ಬೆಳೆಗಳಿಂದ ಪೂಬಳ್ಳಿಯು ನೋಡುವವರ ಕಣ್ಮನಗಳನ್ನು ಸೂರೆಗೊಳ್ಳುವಂತಿತ್ತು. ಆ ಗ್ರಾಮದ ಸುತ್ತಲೂ ಗಿಡ-ಗಂಟಿಗಳು ಹರಡಿಕೊಂಡಿದ್ದವು; ಗ್ರಾಮದಿಂದ ಒಂದು ಮೈಲು ದಾಟಿದರೆ ಸಾಕು ಅರಣ್ಯ ಸದೃಶ್ಯವಾಗಿತ್ತು; ಆ ಪ್ರದೇಶವಲ್ಲಿ ಹಗಲಿನಲ್ಲಿಯೂ ಜನರು ಸುಳಿದಾಡಲು ಅಂಜುತ್ತಿದ್ದರು.

ಹೀಗಿರಲು ಒಂದಾನೊಂದು ದಿನ, ಆ ಪೂಬಳ್ಳಿ ಗ್ರಾಮಕ್ಕೆ ಓರ್ವ ಜಂಗಮರು ಬಿಜಂಗೈದು ಒಂದು ಶಿವಾಲಯದಲ್ಲಿ ಮುಹೂರ್ತ ಮಾಡಿದರು. ಗ್ರಾಮದ ಸಮಸ್ತ ಭಕ್ತ ಜನರೂ ದರ್ಶನಾರ್ಥಿಗಳಾಗಿ ಬಂದು, ಸಾಷ್ಟಾಂಗ ನಮಸ್ಕಾರ ಮಾಡಿ, (ಪ್ರಣಾಮಂಗಳನರ್ಪಿಸಿ) ಮುಹೂರ್ತಮಾಡಿರುವ ಜಂಗಮರ ಯೋಗಕ್ಷೇಮವನ್ನು ವಿಚಾರಿಸಿ, ಪೂಜ್ಯ ಪಾದರ ಪರಿಚಯದ ಬಗ್ಗೆ ಗ್ರಾಮಾಧಿಕಾರಿಗಳು ಅರಿಕೆಮಾಡಿಕೊಂಡರು.

**ಜಂಗಮ :—** ಗೃಹಸ್ಥರೇ, ಎಲ್ಲರೂ ನನ್ನನ್ನು ಅಲ್ಲಮನೆಂದು ಕರೆಯುತ್ತಾರೆ. ನಾನು ಜಂಗಮನೆಂಬುದು ನಿಮಗೆ ತಿಳಿದೇ ಇದೆ; ಆದರೂ ಲೋಕರೂಢಿಯಂತೆ ನೀವು ಕೇಳಿದ್ದೇನೂ ತಪ್ಪಿಲ್ಲ.

**ಗ್ರಾಮಸ್ಥರು :—** ತಮ್ಮ ವಾಸಸ್ಥಾನ ಯಾವುದೆಂಬುದನ್ನು ಕೇಳಬಹುದೇ ?

ಧರ್ಮವು, ಆಚಂದ್ರಾರ್ಕವಾಗಿ ಯಾವ ತರದ ಕಾರಣಗಳಿಂದಾಗಲೀ ಶರಣ ಧರ್ಮವು ಘ್ಲಾನಿಯಾಗದೆ, ವಿಶ್ವಧರ್ಮವಾಗಿ ವಿಶ್ವವಿಖ್ಯಾತಿಯನ್ನು ಪಡೆಯುವ ಸಲುವಾಗಿ, ಒಂದು ಬಲವಾದ ಬುನಾದಿಯನ್ನು ಸಿದ್ಧಪಡಿಸಬೇಕಾಗಿತ್ತು. ಅದಕ್ಕಾಗಿ ಅಲ್ಲಮಪ್ರಭುದೇವರು, ಅನೇಕ ಕಡೆಗಳಲ್ಲಿ ಪಾದಚಾರಿಗಳಾಗಿ ಸಂಚರಿಸಿ, ಎಲ್ಲೆಲ್ಲಿ ಆತ್ಮಾನುಭವಿಗಳಿರುವರೋ, ಎಲ್ಲೆಲ್ಲಿ ಶರಣ ಜಂಗಮ-ರಿರುವರೋ, ಅಲ್ಲಲ್ಲಿಗೆ ತಾವೇ ಪ್ರಯಾಣ ಬೆಳೆಸಿ, ಅವರೊಡನೆ ಸಂಪರ್ಕ-ವಿರಿಸಿಕೊಂಡಿದ್ದರು; ಅವರೆಲ್ಲರ ಪ್ರೇಮವನ್ನು ಗಳಿಸಿಕೊಂಡಿದ್ದರು. ಶರಣ ಧರ್ಮದ ಉದ್ಧಾರಕ್ಕಾಗಿ, ಶರಣ ಧರ್ಮದ ಪ್ರಚಾರಕ್ಕಾಗಿ ಪ್ರಸಂಗ ಬಂದಾಗ ಅವರ ಸಹಕಾರವನ್ನು ಪಡೆಯುತ್ತಿದ್ದರು. ಹೀಗೆ ದೇಶ ಸಂಚಾರ ಮಾಡುತ್ತಾ, ಪೂಬಳ್ಳಿಯಲ್ಲಿರುವ ಅಜ್ಞಾತ ಶಿವಯೋಗಿಗಳನ್ನು ಕಾಣಲು ಬಂದವರು ಪ್ರಭುದೇವರು.

ಹೀಗೆ ಬಂದ ಪ್ರಭುದೇವರನ್ನು ಪೂಬಳ್ಳಿಯ ಗ್ರಾಮಸ್ಥರು ಊರ ಹೊರಗಿರುವ ತಿಳಿನೀರಿನ ಹೊಂಡದ ಕಡೆ ಕರೆದುಕೊಂಡು ಬಂದರು. ದೂರದಿಂದ ಹುಚ್ಚುಸ್ವಾಮಿಯಿರುವ ಸ್ಥಳವನ್ನು ತೋರಿಸಿದರು. ಅಲ್ಲಮ ಪ್ರಭುದೇವರು, ಅಲ್ಲಿಂದ ತಾವು ಗಿಡ-ಗಂಟಿಗಳನ್ನು ದಾಟಿ ಮುಂದೆ ನಡೆಯು ತ್ತಿರುವಾಗ, ಒಂದು ಆಲದ ಮರದ ಕೆಳಗೆ ಆಶ್ಚರ್ಯವನ್ನು ಕಂಡು ಬೆರಗಾ ದರು. ಕಾಮಧೇನುವಿನಂತಹ ಒಂದು ಆಕಳು ಚೆನ್ನಾಗಿ ಹುಲುಸಾಗಿ ಬೆಳೆದ ಹುಲ್ಲನ್ನು ಮೇಯ್ದು ನೀರು ಕುಡಿದು ಬಂದು ಆಲದ ಮರದಡಿಯಲ್ಲಿ ಮೆಲುಕು ಹಾಕುತ್ತಾ ಮಲಗಿತ್ತು. (ಅದರ ಪಕ್ಕದಲ್ಲಿಯೇ ಒಂದು ದೊಡ್ಡ ಹೆಬ್ಬುಲಿಯು ಸಹಾ ಮಲಗಿತ್ತು) ಅಲ್ಲಮಪ್ರಭುದೇವರು ಈ ದೃಶ್ಯವನ್ನು ಕಂಡು, ಬೆರಗಾಗಿ ಆ ಆಲದಮರದತ್ತ ಧಾವಿಸಿ ನಡೆದರು. ಆದರೆ, ಹಿಂಬಾಲಿಸಿದ್ದ ಗ್ರಾಮಸರು ಈ ಹುಲಿಯನ್ನು ಕಂಡು, ಅಂಜಿ ದಿಕ್ಕಾ ಪಾಲಾಗಿ ಓಡಿ ಹೋದರು; ಪ್ರಭುದೇವರೊಬ್ಬರೇ ಆ ಆಲದಮರದ ಕಡೆಗೆ ಹೊರಟರು. ಪ್ರಭುದೇವರನ್ನು ಕಂಡು ಹುಲಿಯು, ಬಾಲ ಅಲ್ಲಾಡಿಸುತ್ತಾ ಬಂದು ಅವರ ಪಾದಕ್ಕೆ ಮಣಿದು ಹಿಂದಿರುಗಿ ಹೊರಟಿತು. ಪ್ರಭುದೇವರು ಸಹಾ ಆ ಹುಲಿಯ ಬೆನ್ನು ಹತ್ತಿ ಹೊರಟರು. ಹುಲಿಯು ಅಲ್ಲೇ ಇದ್ದ

ಒಂದು ಗವಿಯ ಬಾಗಿಲ ಮುಂದೆ ಹೋಗಿ ಮಲಗಿತು. ಜಂಗಮರು ನೆಟ್ಟಗೆ ಗವಿಯ ಬಾಗಿಲ ಮುಂದೇ ಬಂದು ನಿಂತರು; ಹುಲಿಯು ಇನ್ನೂ ಅಲ್ಲೇ ಮಲಗಿತ್ತು.

## ಅಪೂರ್ವ ಸಮ್ಮಿಲನ:

ತತ್‌ಕ್ಷಣವೇ ಗವಿಯೊಳಗಿಂದ ಓರ್ವ ಶಿವಯೋಗೀಶ್ವರರು ಹೊರ-ಬಂದರು; ಪ್ರಭುದೇವರನ್ನು ಆಲಂಗಿಸಿಕೊಂಡು ಆನಂದಾಶ್ರುಗಳನ್ನು ಸುರಿ-ಸಿದರು. ಒಬ್ಬರಿಗೊಬ್ಬರು ಪ್ರಣಾಮಂಗಳನರ್ಪಿಸಿ, ಒಂದು ಮರದಡಿಯಲ್ಲಿ ಕುಳಿತು, ಕೆಲಸಮಯದ ವರೆಗೆ ಚರ್ಚಾಕೂಟ ನಡೆಸಿ, ಆ ಅಜ್ಞಾತ ಶಿವ-ಯೋಗೀಶ್ವರರಿಂದ ಬೀಳ್ಕೊಂಡು, ಪ್ರಭುದೇವರು ಸೊನ್ನಲಗಿಗೆ ಪ್ರಯಾಣ ಬೆಳೆಸಿದರು.

## ಮಹಾರೋಗ ನಿವಾರಣೆ :

ಕೆಲವು ದಿವಸಗಳ ನಂತರ, ಪೂಬಳ್ಳಿಯ ಗ್ರಾಮದ ಓರ್ವ ಸದ್ಗೃಹಸ್ಥನ ಮಗನಿಗೆ ಮಹಾರೋಗ ಬಂದಡರಿತ್ತು. ಅದರ ನಿವಾರಣೆಗಾಗಿ ಅನೇಕ ತರದ ಔಷಧೋಪಚಾರ ಮಾಡಿಸಿದರೂ ಯಾವ ಪ್ರಯೋಜನವೂ ಆಗದೆ, ಮಗನ ರೋಗ ನಿವಾರಣೆಯಾಗುವದಿಲ್ಲವೆಂಬುದನ್ನು ತಿಳಿದು, ಆತ್ಮಹತ್ಯ ಮಾಡಿಕೊಳ್ಳಲು ನಿರ್ಧರಿಸಿ, ಊರ ಹೊರಗಿರುವ ತಿಳಿನೀರಿನ ಹೊಂಡದ ಹತ್ತಿರವಿರುವ ಒಂದು ಹೆಮ್ಮರಕ್ಕೆ ಒಂದು ಹಗ್ಗವನ್ನು ಇಳಿಬಿಟ್ಟು ನೇಣು ಹಾಕಿಕೊಳ್ಳುವ ಮೊದಲು, ತನ್ನ ಇಷ್ಟದೇವತೆಯನ್ನು ಧ್ಯಾನಿಸುತ್ತಾ ಕಣ್ಮುಚ್ಚಿ ಕುಳಿತಿರುವ ಸಮಯದಲ್ಲಿ, ಅದೇ ಮಾರ್ಗವಾಗಿ ಬರುತ್ತಿದ್ದ ಅಜ್ಞಾತ ಶಿವಯೋಗೀಶ್ವರರು ಈ ದೃಶ್ಯವನ್ನು ಕಂಡು, ಆ ಸದ್ಗೃಹಸ್ಥನನ್ನು ಎಬ್ಬಿಸಿ ವಿಚಾರಿಸಲಾಗಿ, ಎಲ್ಲಾ ವಿಷಯ ತಿಳಿದು ಆತನಿಗೆ ಅಭಯವನ್ನಿತ್ತು, ಆತನ ಮಗನ ರೋಗ ನಿವಾರಣೆಗಾಗಿ ಭಸ್ಮವನ್ನು ಮಂತ್ರಿಸಿ ಕೊಟ್ಟು ಕಳಿಸಿದರು. ಆ ಭಸ್ಮಲೇಪನದಿಂದ ಆ ಗೃಹಸ್ಥನ ಮಗನ ಮಹಾರೋಗವು ನಿವಾರಣೆಯಾಯಿತು; ಊರಲ್ಲೆಲ್ಲಾ ಸುದ್ದಿ ಹರಡಿತು. ಸುದ್ದಿ ತಿಳಿದದ್ದೇ

ತಡ, ಇಡೀ ಗ್ರಾಮದ ಜನರು ತಂಡ ತಂಡವಾಗಿ ಆ ಮಹಾತ್ಮನ ದರ್ಶನ ಪಡೆಯಲು ಬಂದರು. ಆದರೆ, ಆ ಸದ್ಗೃಹಸ್ಥನಿಗೆ ನೀಡಿದ ರೂಪದಿಂದ ಇವರೆಲ್ಲರಿಗೆ ದರ್ಶನ ನೀಡಲಿಲ್ಲ. ಒಬ್ಬ ಹುಚ್ಚನಂತೆ ನಟಿಸುತ್ತಾ ಅಲ್ಲಿ ಕುಳಿತಿರುವುದನ್ನು ಕಂಡು, ತಮ-ತಮಗೆ ತಿಳಿದಂತೆ ಮಾತನಾಡುತ್ತಾ ಆ ಮಹಾತ್ಮನ ಹತ್ತಿರ ಬಂದರು. ಆಗ ಶಿವಯೋಗಿಯು ಇವರನ್ನೆಲ್ಲಾ ಕಂಡು, ಕೇಕೆಹೊಡೆದು ನಗಲಾರಂಭಿಸಿದ; ಜನರೂ ಸಹ ನಗಲು ಹತ್ತಿದರು. ಅವರ-ಲ್ಲೊಬ್ಬನು, ಕುಚೇಷ್ಟೆಯಿಂದ ಒಂದು ಕಲ್ಲನ್ನು ಅವರತ್ತ ಬೀಸಿದ; ಆ ಕಲ್ಲು ಮಲ್ಲಿಗೆಯ ಹೂವಾಗಿ ಶಿವಯೋಗಿಯ ಪಾದದ ಮೇಲೆ ಬಂದುಬಿದ್ದಿತು. ಈ ದೃಶ್ಯವನ್ನು, ಪ್ರತ್ಯಕ್ಷ ಕಣ್ಣಾರೆ ಕಂಡ ಗ್ರಾಮಸ್ಥರೆಲ್ಲರೂ ವಿಸ್ಮಯರಾಗಿ, ಕಲ್ಲು ತೂರಿದವನನ್ನು ಎಳೆದು ಹೊಡೆಯಲಾರಂಭಿಸಿದರು. ಅವನು ಮೂರ್ಛೆ ಯಿಂದ ಕೆಳಗೆ ಬೀಳಲು, ಶಿವಯೋಗಿಯು ಬಂದು ಭಸ್ಮಲೇಪನ ಮಾಡಿ ಎಬ್ಬಿಸಿದರು. ಹಾಗೂ ಇನ್ನ ಮ್ಯಾಲೆ ಈ ಹುಚ್ಚನ್ನ ತಡವಬ್ಯಾಡಪಾ, ಹುಚ್ಚನ ತಂಟೆಗೆ ಬರಬೇಡಿರಿ; ಎಂದು ಹೇಳಿ ಅವರನ್ನೆಲ್ಲಾ ಮರಳಿ ಕಳಿಸಿದರು. ಅಂದಿನಿಂದ ಎಲ್ಲರೂ ಮತ್ತೆ ಹುಚ್ಚಸ್ವಾಮಿಯೆಂದೇ ಕರೆಯ ಹತ್ತಿದರು. ಹುಚ್ಚನೆಂದು ಕರೆದರೂ, ಅವರ ಬಗ್ಗೆ ಗ್ರಾಮಸ್ಥರಿಗೆ ಅಪಾರ ವಾದ ಭಯ-ಭಕ್ತಿ ತುಂಬಿ ತುಳುಕುತ್ತಿತ್ತು. ಅಂತೂ ಅಜ್ಞಾತವಾಸದಲ್ಲಿದ್ದ ಶಿವಯೋಗಿಯು, ಒಮ್ಮೆ ಜನರಿಗೆ ತಿಳಿಯುವಂತೆ ಹುಚ್ಚುಸ್ವಾಮಿಯಾಗಿ ಪ್ರಕಟವಾದ.

ಆದರೂ ಈತನು ಯಾರು? ಎಲ್ಲಿಂದ ಬಂದ? ಇವನ ಊರ್‍ಯಾವುದು? ಇವನ ತಂದೆ-ತಾಯಿಗಳ್ಯಾರು? ಎಂಬುದು ಯಾರಿಗೂ ತಿಳಿಯಲು ಸಾಧ್ಯ-ವಾಗಲಿಲ್ಲ. ಒಂದೊಂದು ಸಲ, ಬಂದವರಿಗೆ ದರ್ಶನಲಾಭ ದೊರೆಯುತ್ತಿತ್ತು; ಒಂದೊಂದು ಸಲ, ಬಂದವರಿಗೆ ದರ್ಶನಲಾಭ ದೊರೆಯದೆ ನಿರಾಶರಾಗಿ ತಿರುಗಿ ಮರಳುತ್ತಿದ್ದರು.

ನಂಬಿ ಕರೆದೊಡೆ ಓ ಎನ್ನನೇ ಶಿವ
ನಂಬದೆ ಕರೆದರೆ ಓ ಎನ್ನುವನೇ;
ನಂಬರು, ನೆಚ್ಚರು ಈ ಲೋಕದ ಜನರು
ನಂಬದೆ, ನೆಚ್ಚದೆ ಬರಿದೆ ಕರೆವವರ
ಕೊಂಬಿ ಮೆಟ್ಟಿ ಕೂಗೆಂದ ಕೂಡಲಸಂಗಮದೇವ.

ಕೆಲವು ದಿನಗಳ ನಂತರ, ಪೂಬಳ್ಳಿಯ ಬಡ ವ್ಯಾಪಾರಸ್ಥನೋರ್ವನು ವ್ಯಾಪಾರಕ್ಕೆಂದು ಸ್ವಲ್ಪ ಬೆಳ್ಳಿಯ ನಾಣ್ಯಗಳನ್ನು ತೆಗೆದುಕೊಂಡು, ಹಮ್ಮಿಣಿಯಲ್ಲಿ ಹಾಕಿ ಅದನ್ನು ನಡುವಿಗೆ ಕಟ್ಟಿಕೊಂಡು ಹೊರಟ. ಬರುವಾಗ ದಾರಿಯಲ್ಲಿ ಹುಚ್ಚುಸ್ವಾಮಿಗಳವರ ನೆನಪಾಗಿ, ಪೂರ್ದಿಂದಲೇ ನಮಸ್ಕರಿಸಿ (ಆಶ್ರಮದ ಕಡೆಗೆ ತಿರುಗಿ) ಅಪ್ಪಾ ಹುಚ್ಚುಸ್ವಾಮಿ, ನಾನು ವ್ಯಾಪಾರಕ್ಕೆಂದು ಹೊರಟಿದ್ದೇನೆ ಕೃಪೆ ಮಾಡಿ ನನಗೆ ಲುಕ್ಸಾನ ಆಗುವಂತೆ ಮಾಡಬ್ಯಾಡಪ್ಪಾ; ನನಗೆ ಲಾಭ ಆದರೆ ನಿನಗೂ ಸ್ವಲ್ಪ ಕಾಣಿಕೆ ಸಲ್ಲಿಸುತ್ತೇನೆ ಎಂದು ಹರಕೆ ಹೊತ್ತು ಹೊರಟ. ಪೂಬಳ್ಳಿಯಿಂದ ನಾಲ್ಕು ಮೈಲುಗಳು ದಾಟಿದ ನಂತರ, ಮಾರ್ಗಮಧ್ಯದಲ್ಲಿ ಕೆಲವರು ದಾರಿಗಳ್ಳರು ಹೊಂಚು ಹಾಕುತ್ತಿದ್ದು, ಇವನನ್ನು ತಡೆದು ನಿಲ್ಲಿಸಿದರು. ಆಗ, ಅವನು ಹೆದರಿ ಮನಸ್ಸಿನಲ್ಲೇ ಹುಚ್ಚುಸ್ವಾಮಿಯನ್ನು ಬೇಡಿಕೊಂಡ. "ಅಪ್ಪಾ ಹುಚ್ಚೇಶ್ವರಾ, ನಿನ್ನನ್ನು ನಂಬಿ ನಿನ್ನ ಪರವಾಗಿ (ಅಪ್ಪಣೆ) ಪಡೆದುಕೊಂಡು ಹೊರಟು ಬಂದಿದ್ದೇನೆ; ಈಗ ನೀನೇ ಕಾಯಬೇಕು" ಎಂದು ಪ್ರಾರ್ಥಿಸಿಕೊಂಡ. ಕಳ್ಳರು ಅವನ ನಡುವಿನಲ್ಲಿದ್ದ ಹಮ್ಮಿಣಿಯನ್ನು ಬಿಚ್ಚಿ ಕಸಿದುಕೊಂಡು ನೋಡಿದರು; ಆದರೆ, ಅದರಲ್ಲಿ ಒಂದು ನಾಣ್ಯವೂ ಇರಲಿಲ್ಲ. ಅವರು ಸಿಟ್ಟಾಗಿ ಬರಿದಾಗಿರುವ ಹಮ್ಮಿಣಿಯನ್ನು ಅವನ ಮುಖದ ಮೇಲೆ ಬೀಸಾಡಿ, ಅವನನ್ನು ಬೈದು, ಒಂದೆರಡು ಏಟುಗಳನ್ನು ಹೊಡೆದುಬಿಟ್ಟು ಹೊರಟು ಹೋದರು. ಮುಂದೆ ಆ ವರ್ತಕನು, ಆ ಬರಿದಾದ ಹಮ್ಮಿಣಿಯನ್ನು ಕೈಯ್ಯಲ್ಲಿ ಹಿಡಿದು ವಿಸ್ಮಯನಾಗಿ ಅಲ್ಲೇ ಕುಳಿತುಬಿಟ್ಟ; ಅವನಿಗೂ ಏನೂ ದಿಕ್ಕು ತೋಚಲಿಲ್ಲ. ಇದರಲ್ಲಿದ್ದ ಹಣ ಏನಾಯಿತು ಎಂದು ಅವನಿಗೂ ಸೋಜಿಗವಾಯಿತು. ಕಡೆಗೆ ನಿರ್ವಾಹವಿಲ್ಲದೆ, ಹಣವನ್ನು ಕಳೆದುಕೊಂಡ ದುಃಖದಿಂದ ಉದಾಸೀನನಾಗಿ. ಸಿಟ್ಟಿನಿಂದ ಆ ಬರಿದಾದ ಹಮ್ಮಿಣಿಯನ್ನು ನೆಲದ ಮೇಲೆ ಬೀಸಾಡಿದ. ಕೂಡಲೇ ಅದರಿಂದ ಝಣ-ಝಣವೆಂದು ಬೆಳ್ಳಿ ನಾಣ್ಯಗಳು ಸುರಿದವು. ವರ್ತಕನು ಹಿಡಿಸಲಾರದಷ್ಟು ಹಿಗ್ಗಿನಿಂದ ಅವಸರದಿಂದ ಎಲ್ಲಾ ಹಣವನ್ನು ಬಳಿದುಕೊಂಡು ಎಣಿಸಿ ನೋಡಿದ; ಒಂದು ನಾಣ್ಯವೂ ಕಡಿಮೆಯಿಲ್ಲದಂತೆ ಸರಿಯಾಗಿದ್ದಿತು. ಆಗ ಅವನಿಗೆ ಮನವರಿಕೆಯಾಯಿತು, ಇದೆಲ್ಲಾ ಹುಚ್ಚುಸ್ವಾಮಿಯ ಲೀಲೆಯೆಂದು. ಮುಂದೆ ಅವನು ಆ ಹಣದಿಂದ ವ್ಯಾಪಾರಮಾಡಿ,

ಮೂರು-ನಾಲ್ಕು ತಿಂಗಳಲ್ಲಿ ದೊಡ್ಡ ಮೊತ್ತದ ಲಾಭದಿಂದ ಊರಿಗೆ ಹಿಂದಿರು ಗಿದ. ಊರಿಗೆ ಬಂದು, ಒಂದು ವಾರವಾದರೂ ಹುಚ್ಚುಸ್ವಾಮಿಯ ದರ್ಶನಕ್ಕೆ ಹೋಗಲಿಲ್ಲ. ಒಂದು ದಿನ, ಅವನ ಕನಸಿನಲ್ಲಿ ಹುಚ್ಚುಸ್ವಾಮಿಯವರು ಕಾಣಿಸಿಕೊಂಡು–"ಯಾಕಪ್ಪಾ, ನನ್ನ ಪಾಲು ಕೊಡುವದಿಲ್ಲೇನು? ವ್ಯಾಪಾ ರದಲ್ಲಿ ಲಾಭವಾದರೆ ಕಾಣಿಕೆ ಸಲ್ಲಿಸುವದಾಗಿ ವಚನ ಕೊಟ್ಟಿದ್ದೆಯಲ್ಲಾ, ಮರೆತು-ಹೋದೆಯೇನು?" ಎಂದು ಕೇಳಿದರು; ಕೂಡಲೇ ವರ್ತಕನಿಗೆ ಎಚ್ಚರ ವಾಯಿತು. ಆಗ ತಾನೆ ಬೆಳಗಿನಜಾವವಾಗಿತ್ತು, ಬೆಳ್ಳಿಚಿಕ್ಕಿ ಮೂಡಿತ್ತು. ವರ್ತಕನು ಮತ್ತೆ ಮಲಗದೆ ಎದ್ದು, ಕೂಡಲೇ ಸ್ನಾನ-ಶಿವಪೂಜೆಗಳನ್ನು ಮುಗಿಸಿಕೊಂಡು, ಕೆಲವು ಬೆಳ್ಳಿಯ ನಾಣ್ಯಗಳೊಂದಿಗೆ ಹಣ್ಣು-ಕಾಯಿ-ಕರ್ಪೂರಗಳೊಂದಿಗೆ ತಿಳಿನೀರಿನ ಹೊಂಡದ ಹತ್ತಿರವಿರುವ ಶಿವಯೋಗೀಶ್ವರರ ಆಶ್ರಮಕ್ಕೆ ಬಂದ; ಆದರೆ ಅಲ್ಲಿ ಯಾರೂ ಇರಲಿಲ್ಲ. ಅವನು ನಿರಾಶನಾಗಿ, ಸ್ವಾಮಿಯ ದರ್ಶನವಾಗದೇ ಹೇಗೆ ಮರಳಲಿ ಎಂದು ಮರಗುತ್ತಾ ಅಲ್ಲಿಯೇ ಕುಳಿತುಬಿಟ್ಟ. ಸ್ವಲ್ಪ ಸಮಯದ ನಂತರ, ಶಿವಯೋಗೀಶ್ವರರು ಗವಿಯಿಂದ ಹೊರಬಂದರು. ಮರುಗುತ್ತಾ ಕುಳಿತ ವರ್ತಕನನ್ನು ನೋಡಿ- ಶಿವಪ್ಪಾ, ಏ ಶಿವಪ್ಪಶೆಟ್ಟಿ ಬಾ ಇಲ್ಲಿ ಎಂದು ಕರೆದರು. ಹೆಸರುಗೊಂಡು ಕರೆದಾಕ್ಷಣವೇ ಅವನಿಗೆ ರೋಮಾಂಚನವಾದಂತಾಯಿತು. ಓಡಿಬಂದು, ಸಾಷ್ಟಾಂಗನಮ ಸ್ಕಾರ ಮಾಡಿ ಬುದ್ಧಿ, ನಾನು ಇಲ್ಲಿಗೆ ಇದೇ ಮೊದಲು ಸಲ ಬಂದದ್ದು, ಅಂದ ಮೇಲೆ ನನ್ನ ಹೆಸರು ತಮಗೆ ಹೇಗೆ ತಿಳಿಯಿತು ಎಂದನು.

ಶಿವಯೋಗೀಶ್ವರರು:— ಅಲ್ಲಪ್ಪಾ ನಮಗೆ ಜಗತ್ತೆಲ್ಲಾ ಶಿವಮಯ ಅಲ್ಲವೆ, ಅಂದ ಮೇಲೆ ನೀನೂ ಶಿವಪ್ಪನೇ ಆಗಿರುವೆ ಎಂದರು.

ಅದಿರಲಿ ನೀನು ಬಂದ ಕಾರಣವೇನು ಎಂದರು :

**ವರ್ತಕ:**— ಬುದ್ಧಿ, ನನ್ನದು ತಪ್ಪಾಯಿತು. ನಾನು ಊರಿಗೆ ಬಂದ ದಿವಸವೇ ಬರಬೇಕಾಗಿತ್ತು, ಆದರೆ ಕೆಲವು ಅನಿವಾರ್ಯ ಕಾರಣಗಳಿಂದ ಬರಲಿಲ್ಲ; ಆದ್ದರಿಂದ ನನ್ನನ್ನು ಕ್ಷಮಿಸಬೇಕು. ಎಂದು ತಾನು ತಂದಿದ್ದ ಕಾಣಿಕೆಯನ್ನು ಅವರ ಪಾದದಲ್ಲಿಟ್ಟು ಅದರ ಸಂಗಡ, ಕಾಯಿ-ಕರ್ಪೂರ-ಹಣ್ಣು ಮೊದಲಾದುವುಗಳನ್ನೂ ಇಟ್ಟು ಸಾಷ್ಟಾಂಗ ನಮಸ್ಕಾರ ಮಾಡಿದ.

**ಶಿವಯೋಗೀಶ್ವರರು:**— ಲೋ ಶಿವಪ್ಪ, ಇದೇನೋ ಇದೆಲ್ಲಾ ಗದ್ದಲ, ಇವುಗಳನ್ನೆಲ್ಲಾ ಏಕೆ ತಂದಿರುವೆ, ನಮಗೆ ಈ ಯಾವ ವಸ್ತುಗಳ ಅವಶ್ಯಕತೆಯೂ ಇಲ್ಲ ಅಂದರು;

**ವರ್ತಕ:**—ಬುದ್ಧಿ, ನಾನು ಹರಕೆ ಹೊತ್ತಿದ್ದೆ, ತಮ್ಮ ಕೃಪೆಯಿಂದ ನನ್ನ ಹಣವೂ ಉಳಿಯಿತು. ವ್ಯಾಪಾರದಲ್ಲಿ ಚಲೋ ಲಾಭವೂ ಆಯಿತು. ಆದ್ದರಿಂದ ಈ ಕಾಣಿಕೆಯನ್ನು ಸ್ವೀಕರಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸಿದ.

**ಶಿವಯೋಗೀಶ್ವರರು:**—ಶಿವಪ್ಪಾ, ನಮಗೆ ಹಣದ ಅವಶ್ಯಕತೆಯಿಲ್ಲ. ನಿನಗೆ ಕಾಣಿಕೆ ಸಲ್ಲಿಸುವ ಇಚ್ಛೆಯಿದ್ದರೆ ಜಂಗಮಕ್ಕೆ ಅರ್ಪಿತಮಾಡಿಸು, ಅನಾಥರಿಗೆ ನೀಡು, ಬರುವ ಸೋಮವಾರ ಗಣಾರಾಧನೆ ಮಾಡಿಸು. ನಿನಗೆ ಜಂಗಮರ ಆಶೀರ್ವಾದದಿಂದ ಎಲ್ಲ ರೀತಿಯಿಂದ ಚಲೋ ಆಗುತ್ತದೆ ಎಂದು ಅಪ್ಪಣೆ ಮಾಡಿದರು.

ಶಿವಯೋಗಿಶ್ವರರ ದಿವ್ಯವಾಣಿಯನ್ನು ಕೇಳಿದಾಕ್ಷಣ ಅವನಿಗೆ ಪರಮಾನಂದವಾಯಿತು. ಆಗತಾನೆ ಹೊಸದಾಗಿ ಕಲ್ಯಾಣದಿಂದ ಬಂದಿರುವ ಜಂಗಮರು ಸಾರುತಿದ್ದ ಬಸವಣ್ಣನವರ ವಚನ ನೆನಪಾಯಿತು.

ಗಿಡಕೆ ಬೇರು ಬಾಯಿಯೆಂದು ತಳಕೆ ನೀರನೆರೆದರೆ
ಮೇಲೆ ಪಲ್ಲವಿಸಿತ್ತು ನೋಡ
ಲಿಂಗದ ಬಾಯಿ ಜಂಗಮವೆಂದು
ಪಡಿ ಪದಾರ್ಥ ನೀಡಿದರೆ
ಸಕಲ ಪಡಿ ಪದಾರ್ಥವೀಯುವನು.
ಆ ಜಂಗಮನೇ ಹರನೆಂದು ನಂಬಿ
ನರನೆಂದು ಭಾವಿಸಿದರೆ
ಅವಗೆ ಕೋಟಿ ನರಕ ತಪ್ಪದು
ಕೂಡಲ ಸಂಗಮದೇವಾ.

**—ಬಸವಣ್ಣನವರು**

ಶಿವಯೋಗೀಶ್ವರರ ಅಪ್ಪಣೆಯೂ, ಬಸವಣ್ಣನವರ ವಚನದ ಅರ್ಥವೂ ಒಂದೇ ಆಗಿತ್ತು ಕೂಡಲೆ ಒಪ್ಪಿಕೊಂಡು, ಸಾಷ್ಟಾಂಗನಮಸ್ಕಾರ ಮಾಡಿ, ಮನೆಗೆ ಬಂದು, ಸೋಮವಾರದ ದಿವಸ ಗಣಾರಾಧನೆಯನ್ನು ವಿಜೃಂಭಣೆಯಿಂದ ನಡೆಸಿದನು. ಹಾಗೂ ಅಂದಿನಿಂದ ಹುಚ್ಚುಸ್ವಾಮಿಯವರ ಪರಮ ಭಕ್ತನಾಗಿ, ಪ್ರತಿ ಸೋಮವಾರ ತಪ್ಪದೆ ಜಂಗಮ ದಾಸೋಹ ನಡೆಸುವ ನೇಮವನ್ನಿರಿಸಿಕೊಂಡು ಅದರಂತೆ ತಪ್ಪದೆ ನಡೆಸುತ್ತಾ ಬಂದ:

ದಯೆಯೇ ಧರ್ಮದ ಮೂಲ
ದಯೆಬೇಕು ಸಕಲ ಪ್ರಾಣಿಗಳಲ್ಲಿ.

## ತೋಳನ ಭಕ್ತಿ :

ಒಂದು ದಿವಸ, ದನಕಾಯುವ ಹುಡುಗರು ತಿಳಿನೀರಿನ ಹೊಂಡದ ಹತ್ತಿರವಿರುವ ಹುಲ್ಲುಗಾವಲಿನ ಪ್ರದೇಶದಲ್ಲಿ ದನಗಳನ್ನು ಮೇಯಲು ಬಿಟ್ಟು, ಎಲ್ಲ ದನಕಾಯುವ ಹುಡುಗರೂ ಒಂದು ಮರದ ಕೆಳಗೆ ವಿನೋದದ ಮಾತುಗಳನ್ನಾಡುತ್ತಾ ಕುಳಿತಿದ್ದರು. ತುಂಬಿ ಈಯಲು ಬಂದಿದ್ದ ಒಂದು ಆಕಳು ಪ್ರಸವವೇದನೆಯಿಂದ ಚೀರಲಾರಂಭಿಸಿತು(ಅಂಬಾ ಎಂದು). ದನ ಕಾಯುವ ಹುಡುಗರು ಏನೆಂದು ದೂರದಿಂದಲೇ ನೋಡಿದರು, ಆ ಹುಡುಗರು ನೋಡು-ನೋಡುತ್ತಿದ್ದಂತೆ ಆಕಳು ಹೆಣ್ಣುಕರುವನ್ನು ಈಯಿತು. ಆ ಹುಡುಗರು ಆಕಳ ಹತ್ತಿರ ಬರುತ್ತಿರುವಾಗ ಇದ್ದಕ್ಕಿದ್ದಂತೆ ಒಂದು ತೋಳವು ಓಡಿಬಂದು ಆಗ ತಾನೆ ಈದ ಕರುವನ್ನು ಕಚ್ಚಿಕೊಂಡು ಓಡಿ ಹೋಯಿತು. ಆಗ ಹುಡುಗರು ದಿಕ್ಕುತೋಚದೆ ಏನೂ ಮಾಡಲು ಸಾಧ್ಯವಿಲ್ಲದೆ ಸ್ತಬ್ಧರಾಗಿ ನಿಂತು ನೋಡುತ್ತಿದ್ದರು. ಕರುವನ್ನು ಕಳೆದುಕೊಂಡ ಆಕಳು ಅಂಬಾ ಎಂದು ಚೀರುತ್ತಿತ್ತು. ಗವಿಯೊಳಗಿದ್ದ ಶಿವಯೋಗೀಶ್ವರರಿಗೆ ಆಕಳಿನ ಆರ್ತನಾದ ಕೇಳಿಸಿತು. ಕೂಡಲೇ ಗವಿಯಿಂದ ಹೊರಬಂದು ಏ ತೋಳಪ್ಪಾ ನಿಲ್ಲು-ನಿಲ್ಲು ಆ ಕರುವನ್ನು ಕೊಲ್ಲಬೇಡ, ಆ ಕರು ನಮ್ಮದು ನಮಗಾಗಿ ಹುಟ್ಟಿದೆ. ಆ ಕರುವನ್ನು ತಗೊಂಡು ಬಾ ಎಂದು ಆಜ್ಞಾಪಿಸಿದರು. ಅಷ್ಟೊತ್ತಿಗಾಗಲೇ ತೋಳವು ಸ್ವಲ್ಪ ದೂರ ಓಡಿತ್ತು ಆದರೂ

ಶಿವಯೋಗಿಗಳ ಕಟ್ಟಪ್ಪಣೆ ತೋಳಪ್ಪನಿಗೆ ಕೇಳಿಸಿತು. ಕೂಡಲೇ ಒಂದು ಹೆಜ್ಜೆಯನ್ನೂ ಸಹಾ ಮುಂದಿಡದೆ ಕರುವನ್ನು ಕಚ್ಚಿಕೊಂಡು ಮರಳಿ ಬಂದು ಶಿವಯೋಗೀಶ್ವರನ ಪಾದದ ಹತ್ತಿರ ಬಿಟ್ಟು ನಿಂತಿತು. ಶಿವಯೋಗೀಶ್ವರರು ಎರಡು ಉತ್ತತ್ತಿಕಾಯಿಯನ್ನು ಒಗೆದರು. ಅದನ್ನು ಕಚ್ಚಿಕೊಂಡು ತೋಳವು ಓಡಿಹೋಯಿತು. ತೋಳವು ಬಿಟ್ಟುಹೋದ ಕರುವನ್ನು ಶಿವಯೋಗೀಶ್ವರರು ನೋಡಿದರು, ಹಲ್ಲುಗಳು ನಟ್ಟು ಅರಜೀವವಾಗಿತ್ತು. ಕೂಡಲೇ ಶಿವಯೋಗೀಶ್ವರರು, ಭಸ್ಮವನ್ನು ಮಂತ್ರಿಸಿ ಅದರ ಮೈಮೇಲೆಲ್ಲಾ ಸವರಿದರು. ಕರುವು ಚೇತರಿಸಿಕೊಂಡು ಎದ್ದು ಅಂಬಾ ಎಂದು ಒದರಿತು. ಕರುವಿನ ಧ್ವನಿ ಕೇಳಿ ಆಕಳು ಓಡಿಬಂದು ಕರುವನ್ನು ನೆಕ್ಕಲಾರಂಭಿಸಿತು. ಶಿವಯೋಗೀಶ್ವರರು ನೋಡಿ ಸಂತೋಷಪಡುತ್ತಾ ಸಮಾಧಾನದ ನಿಟ್ಟುಸುರು ಬಿಡುತ್ತಾ ನಿಂತಿದ್ದರು. ಇದನ್ನೆಲ್ಲಾ ದೂರದಿಂದಲೇ ನೋಡುತ್ತಿದ್ದ ದನಕಾಯುವ ಹುಡುಗರು, ಓಡಿ ಬಂದು ಶಿವಯೋಗೀಶ್ವರರ ಪಾದಕ್ಕೆ ನಮಸ್ಕಾರ ಮಾಡಿದರು, ಶಿವಯೋಗೀಶ್ವರರು ಎಲ್ಲರನ್ನೂ ಆಶೀರ್ವದಿಸಿ, ಈ ಆಕಳು ಯಾರದಪ್ಪಾ ಎಂದು ಕೇಳಿದರು. ಅದರಲ್ಲಿ ಒಬ್ಬ ಹುಡುಗ ನಮ್ಮದ್ರೀ ಬುದ್ಧಿ ಅಂದ, ಹಾಗಾದರೆ ನಿಮ್ಮಪ್ಪನ್ನ ಕರೆದುಕೊಂಡು ಬಾ ಹೋಗು ಎಂದರು. ಅದರಂತೆ ಆ ಹುಡುಗ ಅವನ ತಂದೆಯನ್ನು ಕರೆದುಕೊಂಡು ಬಂದ; ಬಂದ ಗೃಹಸ್ಥನು ನಮಸ್ಕಾರ ಮಾಡಿ ನಿಂತ. ದನಕಾಯುವ ಹುಡುಗರ ಬಾಯಿಯಿಂದ ಈಗಾಗಲೇ ಎಲ್ಲ ವಿಷಯವನ್ನೂ ಕೇಳಿ ತಿಳಿದುಕೊಂಡಿದ್ದ ಆ ಗೃಹಸ್ಥನು, ಬುದ್ಧಿ ತಾವು ಕೃಪೆಮಾಡಿ ಉಳಿಸಿಕೊಂಡ ಈ ಆಕಳಕರುವು ತಮ್ಮ ಆಶ್ರಮಕ್ಕೆ ಇರಲಿ ಬುದ್ಧಿ ಎಂದು ಪ್ರಾರ್ಥಿಸಿದ. ಅದಕ್ಕೆ ಶಿವಯೋಗೀಶ್ವರರು ಅಲ್ಲೋ ಕರು ನಮ್ಮಲ್ಲಿ, ಹಿಂಡುವ ಆಕಳು ನಿಮ್ಮಲ್ಲೇನು? ಕರು ಬದುಕುವುದು ಹೇಗೆ ಎಂದರು. ಕ್ಷಮಿಸಬೇಕು ಬುದ್ಧಿ, ಆಕಳು-ಆಕಳಕರು ಎರಡೂ ಆಶ್ರಮಕ್ಕೇ ಸಲ್ಲಲಿ ಎಂದು ಸಾಷ್ಟಾಂಗನಮಸ್ಕಾರ ಮಾಡಿದ. ಅಂದಿನಿಂದ ಆ ಆಕಳು, ಕರು, ಸಹಾ ಆಶ್ರಮವಾಸಿಗಳಾದುವು. ಯಾರ ಸಂಪರ್ಕವೂ ಇಲ್ಲದೆ, ಯಾರಿಗೂ ಅರಿಯದೆ, ಅಜ್ಞಾತವಾಸದಲ್ಲಿ ಆನಂದವಾಗಿ ಕಾಲಕಳೆಯುತ್ತಿದ್ದ ಸ್ವಹಾ ತಪಸ್ವಿ ಮಹಾಶಿವಯೋಗೀಶ್ವರನ ಮಹಿಮೆ, ಅಲ್ಲಮಪ್ರಭುದೇವರು ಬಂದುಹೋದಾಗಿನಿಂದ ಪೂಬಳ್ಳಿಯ ಜನರಿಗೆ ತಿಳಿದು. ದಿನೇ-ದಿನೇ ಅವರ

ಪ್ರಭಾವ ಹೆಚ್ಚುತ್ತಾ, ಆಶ್ರಮದ ಕಡೆ ಬರಹೋಗುವ ಭಕ್ತರ ಜನಸಂಖ್ಯೆ ಹೆಚ್ಚಿತು. ಪೂಬಳ್ಳಿಯ ಜನರಷ್ಟೇ ಅಲ್ಲದೆ, ಸುತ್ತ-ಮುತ್ತಲಿನ ಗ್ರಾಮದವರು ಸಹಾ ಬರಲಾರಂಭಿಸಿದರು. ಮೊದಲಿನಂತೆ ಜನರನ್ನು ನಿರಾಶೆಗೊಳಿಸದೆ, ಬಂದವರಿಗೆ ದರ್ಶನಾಶೀರ್ವಾದವಿತ್ತು, ಕಳುಹಿಸಲು ಪ್ರಾರಂಭಿಸಿದರು ನಮ್ಮ ಶಿವಯೋಗೀಶ್ವರರು. ಪ್ರತಿ ಸೋಮವಾರ ವರ್ತಕನಾದ ಶಿವಪ್ಪಶೆಟ್ಟಿಯು, ತನ್ನ ಹತ್ತಾರು ಬಂಧು-ಮಿತ್ರರೊಂದಿಗೆ ಬಂದು ದರ್ಶನಾಶೀರ್ವಾದ ಪಡೆದು ಹೋಗುತ್ತಿದ್ದ.

ಹೀಗಿರುವಾಗ, ಪೂಬಳ್ಳಿಯ ಸದ್ಗೃಹಸ್ಥನೋರ್ವನ ಸೊಸೆಯು, ಒಂದರ ಮೇಲೊಂದರಂತೆ ಐದು ಹೆಣ್ಣುಮಕ್ಕಳನ್ನು ಹಡೆದಳು. ಎಷ್ಟು ದೇವರ ಹರಕೆ ಹೊತ್ತರೂ, ಎಷ್ಟು ಗಿಡ ಸುತ್ತುಹಾಕಿದರೂ, ನಾನಾ ಪ್ರಯತ್ನಗಳನ್ನು ಮಾಡಿದರೂ ಗಂಡುಮಗು ಆಗಲಿಲ್ಲ. ಆಗ, ಆ ಹೆಣ್ಣುಮಗಳ ಅತ್ತೆಯು ಮಗನಿಗೆ ಮತ್ತೊಂದು ಹೆಣ್ಣು ತಂದು ಮದುವೆಮಾಡುವುದಾಗಿ ನಿಶ್ಚಯಿಸಿದಳು; ಯಾರು ಏನು ಹೇಳಿದರೂ ಆಕೆ ಕೇಳಲಿಲ್ಲ. ನನ್ನ ವಂಶ, ನನ್ನ ಮನಿ ದೀಪ ಉಳಸ್ಕೊಳ್ಳೋದು ನೋಡ್ಲಾ, ಈ ಗೊಡ್ಡ ದನಾನ ಜೋಪಾನಾ ಮಾಡೋದ ನೋಡ್ಲಾ ಎಂದು ನಿಷ್ಠೂರವಾಗಿ ಹೇಳಿಬಿಟ್ಟಳು. ಈ ವಿಷಯ ಆ ಮನೆಗೆ ಹೆಣ್ಣುಕೊಟ್ಟಿದ್ದ ಅಭಾಗ್ಯನಾದ ತಂದೆಗೆ ತಿಳಿಯಿತು. ಕೂಡಲೇ ಪೂಬಳ್ಳಿಗೆ ಧಾವಿಸಿ ಬಂದ, ಬೀಗತಿಯ ಕಾಲುಗಳನ್ನು ಹಿಡಿದು ಬೇಡಿಕೊಂಡ ಆದರೂ ಆಕೆಗೆ ಕನಿಕರ ಬರಲಿಲ್ಲ. ತನ್ನ ಮಗನಿಗೆ ಬೇರೊಂದು ಹೆಣ್ಣು ತಂದು ಮಾಡೇತೀರುತ್ತೇನೆ ನಿನ್ನ ಮಗಳನ್ನು ನಿನ್ನ ಬೆನ್ನುಹಚ್ಚಿ-ಕೊಂಡು ಹೋಗು ಎಂದಳು. ಆ ಗೃಹಸ್ಥನು ನಿರ್ವಾಹವಿಲ್ಲದೆ, ಮರು ಮಾತಾಡದೆ ಹೊರಬಂದು, ತನ್ನ ಮಿತ್ರನಾದ ವರ್ತಕ ಶಿವಪ್ಪ ಶೆಟ್ಟಿಯ ಮನೆಗೆ ಬಂದು ತನ್ನ ದುಃಖವನ್ನು ತೋಡಿಕೊಂಡನು. ಮಿತ್ರನ ದುಃಖವನ್ನು ನೋಡಿ ಮನಕರಗಿದ ಶಿವಪ್ಪಶೆಟ್ಟಿಯು, ತನ್ನ ಆರಾಧ್ಯದೇವತೆಯಾದ ಶಿವಯೋಗೀಶ್ವರರ ಕಡೆ ಕರೆದುಕೊಂಡು ಹೋದ; ಶಿವಯೋಗೀಶ್ವರರಿಗೆ ನಮಸ್ಕರಿಸಿ ಕುಳಿತುಕೊಂಡರು. ಆಗ ತನ್ನ ಮಿತ್ರನಿಗೊದಗಿರುವ ಕಷ್ಟವನ್ನು ಶಿವಪ್ಪಶೆಟ್ಟಿ ಅರಿಕೆ ಮಾಡಿಕೊಂಡ. ಎಲ್ಲವನ್ನೂ ಕೇಳಿದ ಶಿವಯೋಗೀಶ್ವರರು ಎರಡು-ಮೂರು ನಿಮಿಷಗಳವರೆಗೆ ಮೌನವಾಗಿ ಕುಳಿತಿದ್ದು, ನಂತರ

ಶಿವಪ್ಪಾ, ಈಗ ಆ ಹೆಣ್ಣುಮಗಳು ಇಲ್ಲೆ ಇದ್ದಾಳೋ ಅಥವಾ ತವರಿನಲ್ಲಿ ದ್ದಾಳೋ ಎಂದು ಕೇಳಿದರು.

**ಶಿವಪ್ಪ:**—ಇಲ್ಲೆ, ಗಂಡನ ಮನೆಯಲ್ಲೇ ಇದ್ದಾಳ್ರಿ ಎಪ್ಪಾ ಎಂದ.

**ಶಿವಯೋಗೀಶ್ವರರು:**—ಹಾಗಾದರೆ, ಆ ಹೆಣ್ಣುಮಗಳ ಅತ್ತೆಯನ್ನು ಇಲ್ಲಿಗೆ ಕರೆದುಕೊಂಡು ಬಾ, ಎಂದು ಅಪ್ಪಣೆಮಾಡಿದರು. ಶಿವಯೋಗೀಶ್ವರರ ಅಪ್ಪಣೆಯಾದದ್ದೇ ತಡ ಇಬ್ಬರೂ ಎದ್ದು ನಮಸ್ಕರಿಸಿ ಬಂದರು. ನೆಟ್ಟಗೆ ಮಿತ್ರನ ಬೀಗರ ಮನೆಗೆ ಬಂದು, ಬೀಗತಿಯಾದ ಹೆಣ್ಣುಮಗಳ ಅತ್ತೆಯನ್ನು ಕಂಡು, ನಡೆದ ವೃತ್ತಾಂತವನ್ನೆಲ್ಲಾ ತಿಳಿಸಿ, ಶಿವಯೋಗೀಶ್ವರರ ದರ್ಶನಕ್ಕೆ ಬರಲು ಕರೆದರು. ಆದರೆ ಯಾರ ಮಾತಿಗೂ ಬಗ್ಗದ ಆ ಮುದುಕಿ- ಏನು? ನಾನು ಆ ಸನ್ಯಾಸಿ ಹತ್ತಿರ ಬರಬೇಕಂತ, ಯಾಕೆ? ನನಗೆಲ್ಲ ಗೊತ್ತು, ನೀವು ಹೋಗಿ ಅವನ ಕಾಲ್ಹಿಡಕೊಂಡು, ಅತ್ತು-ಕರೆದು ಕೇಳ್ಕೊಂಡಿದ್ದರಿ, ಅದಕ್ಕೆ ನನ್ನ ಕರೆಸಿ ಸಮಾಧಾನ ಹೇಳೋಕೆ ಕರಸಲಿಕ್‌ಹತ್ಯಾನ ನಾನೇನ ಬರೂದಿಲ್ಲ. ತಾನೊಬ್ಬ ಸನ್ಯಾಸಿ ಆಗ್ಯಾನ, ಇನ್ನ ನನ್ನ ಮಗನೊಬ್ಬನ್ನ ಸನ್ಯಾಸಿ ಮಾಡಬೇಕಂತಾನೇನು? ನಾನು ಬರೂದಿಲ್ಲ ಎಂದು ನಿಷ್ಠುರವಾಗಿ ಹೇಳಿ ಬಿಟ್ಟಳು. ಆ ಮುದುಕಿಯನ್ನು ಬೇಕಾದಷ್ಟು ರೀತಿಯಿಂದ ಪ್ರಯತ್ನಿಸಿದರು, ಆ ಮುದುಕಿ ಒಪ್ಪಲಿಲ್ಲ. ಶಿವಪ್ಪಶೆಟ್ಟಿಯು ನಿರ್ವಾಹವಿಲ್ಲದೆ, ತನ್ನ ಮಿತ್ರ ನನ್ನು ತನ್ನ ಮನೆಗೆ ಕರೆದುಕೊಂಡು ಹೋದ. ಮರುದಿವಸ ಮುದುಕಿಯು ಎಂದಿನಂತೆ ಎದ್ದಳು, ಆದರೆ ಆಕೆಯ ಕಣ್ಣಿಗೆ ಕತ್ತಲೆ ಕವಿದಿತ್ತು, ಆಕೆಯ ಕಣ್ಣುಗಳೇ ಕಾಣದಂತಾಗಿದ್ದವು. ಮುದುಕಿಯು ಗಾಬರಿಯಾಗಿ ಚೀರಾಡ-ಲಾರಂಭಿಸಿದಳು, ಮನೆಮಂದಿಯೆಲ್ಲಾ ನೆರೆದರು. ಯಾಕಬೇ ಯವ್ವಾ, ನಿಂಗೇನಾಗೈತಿ, ಯಾಕ್ ಚೀರತಿದ್ದಿ ಎಂದು ಕೇಳಿದರು.

ಯವ್ವಾ, ನನ್‌ಕಣ್ಣೇ ಕಾಣಸ್‌ವಲ್‌ದ್ರೋ ಯವ್ವಾ; ಹಿಂಗ್ಯಾಕ ಆತ್ರೀ ಯವ್ವಾ.

ನನ್ನ ಕಣ್ಣೇ ಯವ್ವಾ, ಎಂದು ಎದೆ-ಎದೆ ಬಡಿದುಕೊಂಡು ಅಳಲಾ-ರಂಭಿಸಿದಳು. ಕ್ಷಣಮಾತ್ರದಲ್ಲಿ ಮುದುಕಿಯ ಕಣ್ಣು ಹೋದ ಸುದ್ದಿ ಊರಲ್ಲೆಲ್ಲಾ ಹಬ್ಬಿ, ಇಡೀ ಊರ ಜನರು ಬಂದುನೋಡಿ—

ಅಯ್ಯೋ ಪಾಪ, ಹಿಂಗಾಗಬಾರದಿತ್ತು. ಇಸ್ನೂ ಮೊಮ್ಮಗನ ಕಾಣ ಬೇಕಂತ ಬಾಳ ಆಸೆ ಇಟ್ಟುಕೊಂಡಿದ್ಲು, ದೇವರು ಹಿಂಗ್ ಮಾಡಬಾರದಾ ಗಿತ್ತು ಎಂದು ಒಬ್ಬಾಕಿ ಅಂದಳು.

ಇನ್ನೊಬ್ಬಾಕಿ:—ಅಯ್ಯೋ ಹೆಚ್ಚಿನಾಕಿ ಈಕಿ, ದೇವರ ಮಾಡ್ಯಾಸಂತೆ ದೇವರು; ದೇವರ ಯಾಕ ಮಾಡಾಕ ಹೋಗ್ತಾನೆ, ತಾನೇ ಮಾಡ್ಕೊಂಡಾಳೆ; ತನ್ನ ಪಾಪ ತನಗೇ ಬಡಕೊಂಡೈತಿ ಅಂದಳು.

ಮತ್ತೊಬ್ಬಾಕಿ:—ಹೌದಬೇಯವ್ವಾ, ನಿನ್ನ ಮಾತ ಖರೇನೋಡು. ನಿನ್ನೆ ಆ ಹುಚ್ಚಯ್ಯಸ್ವಾಮಿನ ಅಂಥ ಸನ್ಯಾಸಿ, ಇಂಥ ಸನ್ಯಾಸಿ ಅಂತ ಬಾಯಿಗೆ ಬಂದಂಗ ಬೈದಾಳ, ಅದಕ್ಕೇ ಹಿಂಗಾಗೈತಿ.ಆ ಹುಚ್ಚಯ್ಯಸ್ವಾಮಿ ಶಾಪ ಬಡಕೊಂಡೈತೇ ಯವ್ವಾ; ಬೆಳಿಗಾಗೋದ್ರಾಗ ಕಣ್ಣೇ ಇಂಗೋಗೈತಿ.

ಹೀಗೆ, ಜನರು ತಮ-ತಮಗೆ ತಿಳಿದಂತೆ ಮಾತಾಡಿಕೊಂಡರು.

ಈ ಎಲ್ಲಾ ಮಾತುಗಳನ್ನು ಕೇಳಿದ ಮುದುಕಿ, ತನ್ನ ತಪ್ಪು ತನಗೆ ಅರಿವಾಗಿ, ತನ್ನೊಳಗೆ ತಾನೇ ಮರುಗಿ. ಮಗನನ್ನು ಕರೆದು ತನ್ನ ತಪ್ಪನ್ನು ಒಪ್ಪಿಕೊಂಡು, ಶಿವಪ್ಪಶೆಟ್ಟರನ್ನೂ, ತನ್ನ ಬೀಗನನ್ನೂ ಕರೆತರಲು ಹೇಳಿದಳು. ಕೂಡಲೇ, ಮಗನು ಓಡಿಹೋಗಿ ತನ್ನ ತಾಯಿಗಾಗಿರುವ ಪರಿಸ್ಥಿತಿಯನ್ನು ತಿಳಿಸಿ, ಅವರಿಬ್ಬರನ್ನೂ ತನ್ನ ಮನೆಗೆ ಕರೆದುಕೊಂಡು ಬಂದ. ಶಿವಪ್ಪ ಶೆಟ್ಟರು ಮುದುಕಿಗೆ ಸಮಾಧಾನ ಹೇಳಿ- ಮುದುಕಿಯನ್ನೂ, ಮುದುಕಿಯ ಮಗ, ಸೊಸೆ, ಆಕೆಯ ಗಂಡ, ಎಲ್ಲರನ್ನು ಕರೆದುಕೊಂಡು ಆಶ್ರಮಕ್ಕೆ ಬಂದು, ಶಿವಯೋಗೀಶ್ವರರ ಪಾದಕ್ಕೆ ಎಲ್ಲರೂ ನಮಸ್ಕರಿಸಿ ಕುಳಿತರು. ಆಗ ಶಿವ-ಯೋಗೀಶ್ವರರು- ಮುದುಕಿಯನ್ನು ಮಾತಾಡಿಸಿ, ಈ ಸನ್ಯಾಸಿ ಹತ್ತಿರ ಯಾಕ ಬಂದೆವ್ವಾ ಎಂದರು.

**ಮುದುಕಿ:**—ಯಪ್ಪಾ ನನ್ದ ತಪ್ಪಾಯ್ತು, ಇನ್ನೊಮ್ಮೆ ಎಂದಿಗೂ ಹಾಂಗನ್ನೋದಿಲ್ಲ. ಮೊದಲ ಕಣ್ ಕಾಣೋಹಂಗ ಮಾಡಪ್ಪಾ ಅಂದಳು.

**ಶಿವಯೋಗೀಶ್ವರರು:**—ನಿನಗೆ ಮೊದಲು ಕಣ್ ಕಾಣಿಸಬೇಕೋ, ಮೊಮ್ಮಗ ಬೇಕೋ ಎಂದರು.

**ಮುದುಕಿ:**—ಕಣ್ಣೇ ಇಲ್ ದೇ ಮೊಮ್ಮಗನ ಹ್ಯಾಂಗ ನೋಡ್ಲಪ್ಪಾ. ಮೊದಲ ಕಣ್ ಕೊಡು, ಆ ಮ್ಯಾಗ ವರ್ಷ ತುಂಬೂದರೊಳಗೆ ಮೊಮ್ಮಗನ ಕೊಡು ಅಂದಳು.

**ಶಿವಯೋಗೀಶ್ವರರು:**—ತಥಾಸ್ತು! ಹಾಗೆ ಆಗಲಿ ತಾಯಿ, ನಿನ್ನಿಚ್ಛೆ-ಯಂತೆ ಆಗಲಿ. ಎಂದು ಭಸ್ಮ ಮಂತ್ರಿಸಿ, ಮುದುಕಿಯ ಕಣ್ಣಿಗೆ ಹಚ್ಚಲು ಹೇಳಿದರು. ಭಸ್ಮವನ್ನು ಕಣ್ಣಿಗೆ ಹಚ್ಚಿದ ಕೂಡಲೇ, ಮುದುಕಿಯ ಕಣ್ಣುಗಳು ಮೊದಲಿನಂತೆ ಕಾಣಹತ್ತಿದವು. ಶಿವಯೋಗೀಶ್ವರರನ್ನು ಕಂಡು ಆನಂದವಾಗಿ, ಮುದುಕಿಯು ಮತ್ತೆ-ಮತ್ತೆ ನಮಸ್ಕಾರ ಮಾಡಿದಳು. ಆಗ ಶಿವಯೋಗೀಶ್ವರರು ಇನ್ನೇನವ್ವಾ ನಿನಗೆ ಕಣ್ಣು ಬಂತು, ಇನ್ನ ನನ್ನ ಮಾತ ನೀನು ಕೇಳಬೇಕು ಎಂದರು.

**ಮುದುಕಿ:**—ಆಗಲ್ರಿಪ್ಪಾ, ನೀವು ಏನ ಹೇಳಿದ್ರೂ ಕೇಳ್ತಿನಿ ಹೇಳ್ರಪ್ಪಾ ಎಂದಳು.

**ಶಿವಯೋಗೀಶ್ವರರು:**—ಬರೋ ಸೋಮವಾರ ಗಣಾರಾಧನೆ ಮಾಡಿಸಬೇಕು, ಬಡಬಗ್ಗರಿಗೆ ದಾನ ಮಾಡಬೇಕು.

**ಮುದುಕಿ:**—ಮೊಮ್ಮಗಾ ಹುಟ್ಟಲ್ರಿಯಪ್ಪಾ, ತಪ್ಪದೇ ಮಾಡಸ್ತಿನಿ ಎಂದಳು.

**ಶಿವಯೋಗೀಶ್ವರರು:**—ಮೊಮ್ಮಗ ಹುಟ್ಟಿದರೆ ಮತ್ತ ಅದ ಬೇರೆ. ಮತ್ತೊಂದು ಮಾಡುವ ಒಂದು ಮಹತ್ಕಾರ್ಯವಿದೆ; ಈಗ ನಿನಗೆ ಕಣ್ಣು ಬಂದಿದ್ದಕ್ಕೆ ಮೊದಲು ಗಣಾರಾಧನೆ ಮಾಡಿಸಿ ಬಡ ಜನರಿಗೆ ಉಣ್ಣಿಸು; ಇದೇ ಮಾನವತೆಯ ಕುರುಹು.

**ಮುದುಕಿ:**—ಅಂತೂ ನೀ ನನ್ನ ಬೀಡಾಂವ ಅಲ್ಲ. ಹೂಂ, ಆಗ್ಲಿ ಮಾಡಸ್ತೀನಿ ಅಂದಳು.

**ಶಿವಯೋಗೀಶ್ವರರು:**—ಮತ್ತೊ ಇನ್ನೊಂದು ಮಾತಿದೆ.

**ಮುದುಕಿ:**—ಅದೇನ್ರಪಾ ಅದು.

**ಶಿವಯೋಗೀಶ್ವರರು:**—ಈಗಿರೋ ನಿನ್ನ ಸೊಸೆಯೇ, ವರ್ಷ ತುಂಬುವದರೊಳಗೆ ಗಂಡುಮಗುವನ್ನು ಹಡೆಯುತ್ತಾಳೆ. ಆದ್ದರಿಂದ, ಇನ್ನೊಬ್ಬ ಸೊಸೆಯ ವಿಚಾರವನ್ನು ಬಿಟ್ಟುಬಿಡು ಎಂದು ಅಪ್ಪಣೆಮಾಡಿದರು.

**ಮುದುಕಿ:**—ಹಂಗೇ ಆಗಲ್ರಪಾ, ನನಗೂ ಅದೇ ಬೇಕಾಗೈತಿ ಎಂದಳು.

ಶಿವಯೋಗೀಶ್ವರರ ಕೃಪಾಶೀರ್ವಾದದಿಂದ, ವರ್ಷ ತುಂಬುವುದರೊಳಗೆ ಮುದುಕಿಯು ಮೊಮ್ಮಗನನ್ನು ಕಂಡಳು.

ಕಳಬೇಡ, ಕೊಲಬೇಡ ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,
ತನ್ನ ಬಣ್ಣಿಸ ಬೇಡ ಇದಿರು ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ.
ಇದೇ ನಮ್ಮ ಕೂಡಲ ಸಂಗನ ಒಲಿಸುವಪರಿ.

## ನ್ಯಾಯ ನಿರ್ಣಯ:

ಎಲ್ಲಕ್ಕಿಂತಲೂ ನ್ಯಾಯವು ಶ್ರೇಷ್ಠವಾದದ್ದು; ಸತ್ಯದ ಪ್ರತಿರೂಪವೇ ನ್ಯಾಯ. ಆದರೆ, ನ್ಯಾಯದ ಹೆಸರಿನಲ್ಲಿ ಸ್ವಾರ್ಥಿಗಳು ಎಷ್ಟೋಸಲ ಅನ್ಯಾಯ ವನ್ನೆಸಗುವುದೂ ಉಂಟು. ಅನ್ಯಾಯವನ್ನೇ ಸತ್ಯವೆಂದು, ನ್ಯಾಯುವನ್ನಾಗಿ ಮಾಡುವವರಿಗೇನೂ ಕಮ್ಮಿ ಇಲ್ಲ. ಆದರೂ ಅಂಥಹ ಅನ್ಯಾಯವನ್ನು ಕಂಡು ಹಿಡಿದು, ನಿಜವಾದ ನ್ಯಾಯವನ್ನು ಎತ್ತಿಹಿಡಿಯುವುದೇ ನ್ಯಾಯಾಧೀಶನ ಕರ್ತವ್ಯ. ಈ ಕರ್ತವ್ಯವು ಬಹಳ ಸಮಸ್ಯಾತ್ಮಕವಾದದ್ದು; ಸುಳ್ಳು ಸಾಕ್ಷಿ ದಾರರನ್ನು ಕಂಡುಹಿಡಿದರೆ, ಮಾತ್ರ ನ್ಯಾಯವನ್ನು ನಿರ್ಣಯಿಸಬಹುದು. ಅಂತೂ ನ್ಯಾಯನಿರ್ಣಯದಲ್ಲಿ ನ್ಯಾಯಾಧೀಶನಾಗುವುದು ಬಹು ಗುರುತರದ ಹೊಣೆ.

ಒಮ್ಮೆ ನಮ್ಮ ಹುಚ್ಚುಸ್ವಾಮಿಯವರು ಒಂದು ಪ್ರಸಂಗದಲ್ಲಿ ನ್ಯಾಯಾಧೀಶನ ಪಾತ್ರವಹಿಸಬೇಕಾಗಿ ಬಂದಿತು.

ಪೂಬಳ್ಳಿಯ ಭೀಮಪ್ಪನೆಂಬ ಗೃಹಸ್ಥನೋರ್ವನು, ತನ್ನ ಮನೆತನದ ಅಡಚಣೆಗಾಗಿ ಅದೇ ಗ್ರಾಮದ ಕರಣಿಕನ ಹತ್ತಿರ ಐವತ್ತು ಬೆಳ್ಳಿನಾಣ್ಯಗಳಿಗೆ ತನ್ನ ಎಂಟು ಎಕರೆ ಜಮೀನನ್ನು ಒತ್ತೆ ಇಟ್ಟಿದ್ದ. ಮುಂದೆ ನಾಲ್ಕಾರು ವರ್ಷಗಳ ನಂತರ, ಭೀಮಪ್ಪನು ಐವತ್ತು ಬೆಳ್ಳಿನಾಣ್ಯಗಳನ್ನು ತೆಗೆದು ಕೊಂಡು ಹೋಗಿ ಕರಣಿಕನಿಗೆ ಒಪ್ಪಿಸಿ, ತನ್ನ ಹೊಲವನ್ನು ಮತ್ತೆ ತನಗೆ ಒಪ್ಪಿಸಬೇಕೆಂದು ಕೇಳಿಕೊಂಡ. ಆದರೆ ಚಾಣಾಕ್ಷನಾದ ಕರಣಿಕ ನಿರಕ್ಷರಿಯಾಗಿದ್ದ ಭೀಮಪ್ಪನನ್ನು ವಂಚಿಸಿ, ಐವತ್ತು ಬೆಳ್ಳಿನಾಣ್ಯಗಳನ್ನು ಕೊಟ್ಟು ನೂರು ಬೆಳ್ಳಿನಾಣ್ಯಗಳೆಂದು ಬರೆದುಕೊಂಡು, ಎಡಗೈ ಹೆಬ್ಬಟ್ಟಿನ ಗುರುತು ಪಡೆದುಕೊಂಡಿದ್ದ. ಅದರಂತೆ ತನಗೆ ಇನ್ನೂ ಐವತ್ತು ಬೆಳ್ಳಿನಾಣ್ಯಗಳು ತಂದುಕೊಟ್ಟರೆ ಮಾತ್ರ ಹೊಲ ಬಿಟ್ಟುಕೊಡುವುದಾಗಿ ಬೆದರಿಸಿದ; ಭೀಮಪ್ಪನ ಕೈಕಾಲೇ ಹೋದಂತಾಯಿತು. ಊರ ಹಿರಿಯರನ್ನೆಲ್ಲಾ ಕರೆಸಿ, ತನ್ನ ದುಃಖವನ್ನು ತೋಡಿಕೊಂಡ; ಆದರೆ ಕಾಗದ ಪತ್ರದ ಲೇಖ ಇರುವುದರಿಂದ ಯಾರಿಗೂ ಏನೂ ಹೇಳಲು ಸಾಧ್ಯವಾಗಲಿಲ್ಲ.

ಎಲ್ಲರೂ ಕಾಗದಪತ್ರದಂತೆ ಕರಣಿಕನ ಮಾತನ್ನೇ ಎತ್ತಿಹಿಡಿಯುತ್ತಿದ್ದರು. ಕೆಲವರಿಗೆ ಕರಣಿಕನ ಮೋಸವೂ ತಿಳಿದಿತ್ತಾದರೂ, ಅವನನ್ನು ಎದುರಿಸಿ ಮಾತನಾಡಲು ಯಾರಿಗೂ ಧೈರ್ಯವಿರಲಿಲ್ಲ. ಕಡೆಗೆ ಒಂದು ದಿವಸ ಭೀಮಪ್ಪನು ಮನೆತನದ ಅಡಚಣಿಯಿಂದ ಬೇಸತ್ತು, ಕರಣಿಕನು ಮಾಡಿದ ಮೋಸವನ್ನು ನೆನೆದು, ಹೊಟ್ಟೆ ಉರಿದು ಸಿಟ್ಟಿನಿಂದ ಮತ್ತೆ ಒಂದು ದಿವಸ ಗ್ರಾಮದ ಪ್ರಮುಖರನ್ನೆಲ್ಲಾ ಕೂಡಿಸಿದ; ತನಗೆ ನ್ಯಾಯ ದೊರಕಿಸಿಕೊಡಬೇಕೆಂದು ಗ್ರಾಮದ ಗೌಡರ ಕಾಲುಹಿಡಿದುಕೊಂಡ. ಆಗ ಗ್ರಾಮದ ಗೌಡರು ಕರಣಿಕನನ್ನು ಕರೆಸಿದರು; ಮತ್ತೆ ಅವನು ತನ್ನ ಕಾಗದಪತ್ರದಂತೆಯೇ ವಾದಿಸಿದ. ಆಗ ಹೊಟ್ಟೆಯುರಿದ ಭೀಮಪ್ಪನು– ಏ ಕರಣಿಕ, ಹೀಂಗ ಏಸಮಂದಿ ಮನಿ ಹಾಳಮಾಡಿದ್ದಿ ಕಾಗದಪತ್ರ ಅಂತೆ ಕಾಗದಪತ್ರ, ನಿನ್ನ ಕಾಗದಪತ್ರಕ್ಕೆ ಬೆಂಕಿಹಚ್ಚು. ನಿನ್ನ ಮಾತ ಖರೇ ಇದ್ರೆ ನಡೀ ಹುಚ್ಚು

ಸ್ವಾಮಿಗಳ ಹತ್ತಿರ, ಅವರ ಪಾದಾಮುಟ್ಟಿ ಒಂದುನೂರು ಬೆಳ್ಳಿನಾಣ್ಯ ಕೊಟ್ಟಿದ್ದ ಖರೇ ಅಂತಾ ಹೇಳಿಬಿಡು. ಈಗ ನಾನ ಕೊಟ್ಟಿರೋ ಐವತ್ತು ನಾಣ್ಯಗಳನ್ನೂ ನಿನಗೆ ಬಿಡತೀನಿ ನಡೀ ನಿನಗ ಧೈರ್ಯ ಇದ್ರೆ ಅಂದ. ಕರಣಿಕ ತಬ್ಬಿಬ್ಬಾದ, ಆದರೂ ಜನರಲ್ಲಿ ತೋರಗೊಡಲಿಲ್ಲ; ತನ್ನ ಪೌರುಷವನ್ನೇ ಮುಂದುಮಾಡಿದ. ಹೋಗೋ ಹುಚ್ಚರಂಡೇಗಂಡ, ಇಂಥ ಹೊಲ-ಮನಿ ನ್ಯಾಯಕ್ಕೆಲ್ಲಾ ಅಂಥ ದೊಡ್ಡ ಸ್ವಾಮಿಗಳ ಕಡೆ ಹೋಗ್ತಾರೇನು. ದೊಡ್ಡ ಸ್ವಾಮಿಗಳ ಹೆಸರ ಹೇಳ್ಬಿಟ್ಟರೆ, ಊರ ಜನ ನಿನ್ನ ನಂಬಿಬಿಡ್ತಾರೇಂತ ಈ ತರ ಆಟಹೂಡಿದ್ದಿಯೇನು ಹೋಗೋ ಹೋಗು ಎಂದ.

ಆಗ ಗ್ರಾಮದ ಕೆಲವುಪ್ರಮುಖರು, ಕರಣಿಕರೇ ನೀವು ಖರೇ ಇದ್ದರಿ ನಿಮಗ್ಯಾಕರಿ ಅಂಜಿಕಿ ಅವನ ಮಾತೂ ಖರೇ ನಡೀರಿ; ಸ್ವಾಮಿಗಳ ಹತ್ತಿರ ಹೋಗೋಣ ಅಂದರು. ಕರಣಿಕನಿಗೆ ಕುತ್ತಿಗೆಗೆ ಉರುಲು ಬಂದಂತಾಯಿತು; ಆಗ ಒಂದು ಉಪಾಯ ಹುಡುಕಿದ ಕರಣಿಕ. ಅಲ್ರೀ ಗೌಡರೇ, ನಿಮ್ಮ ಮಾತು ಖರೇ ಆದರೆ ನಾವು ಬ್ರಾಹ್ಮಣರು, ಸ್ವಾಮಿಗಳ ಪಾದಮುಟ್ಟಿದರೆ ನಮ್ಮ ಜನ ನನ್ನ ಸುಮ್ಮನೇ ಬಿಡತಾರೇನ್ರಿ, ನನ್ನ ಕುಲದಿಂದ ಹೊರಗಿಟ್ಟರೆ ನಾನೇನ್ಮಾಡಲಿ ಎಂದ. ಆಗ ಗ್ರಾಮಸ್ಥರು, ಕರಣಿಕರೇ ನೀವು ಪಾದಾ ಮುಟ್ಟಬೇಡಿರಿ; ದೂರದಿಂದ ನಿಂತು, ಸ್ವಾಮಿಗಳ ಮುಂದೆ ನಿಮ್ಮ ಕಾಗದ ಪತ್ರ ತೋರಿಸಿ, ನಿಮ್ಮ ಮಾತು ಖರೇ ಎಂದು ಪ್ರಮಾಣಮಾಡಿರಿ ಸಾಕು ಎಂದರು. ಕರಣಿಕನಿಗೆ ಏನು ಮಾತನಾಡಬೇಕೆಂಬುದೇ ತೋಚದೆ, ವಿಚಾರ ಮಾಡಿ ಹೇಳುತ್ತೇನೆ ಎಂದ. ನಂತರ ಕರಣಿಕ ವಿಚಾರಮಾಡಿದ, ಆ ಸ್ವಾಮಿಗಳೇನ ದೇವರೇನು, ಮುಗಿಲ ಮೇಲಿಂದ ಬಿದ್ದಾರೇನು, ದೂರ ನಿಂತು ಆಣೆ ಮಾಡಿಬಿಟ್ಟರಾಯಿತು ಎಂದುಕೊಂಡು: ಆಗಲಿ ಸ್ವಾಮಿಗಳ ಮುಂದೆ ಆಣೆ ಮಾಡುತ್ತೇನೆ ಎಂದ. ಎಲ್ಲರೂ ಕರಣಿಕನನ್ನೂ. ಭೀಮಪ್ಪನನ್ನೂ ಕರೆದು ಕೊಂಡು ಸ್ವಾಮಿಗಳ ಹತ್ತಿರ ಹೋದರು. ಗ್ರಾಮಸ್ಥರನ್ನು ಕಂಡು ಸ್ವಾಮಿಗಳು– ಬನ್ನಿರಿ-ಬನ್ನಿರಿ, ಇದೇನು? ಇಷ್ಟು ಜನ ಒಟ್ಟಾಗಿ ಬಂದಿದ್ದೀರಿ ಏನು ವಿಶೇಷ ಎಂದು ಕೇಳಿದರು. ಆಗ ಗೌಡರು, ಭೀಮಪ್ಪನ ಹಾಗೂ ಕರಣಿಕನ ಮಧ್ಯೆ ಬಂದಿರುವ ಸಮಸ್ಯೆಯನ್ನು ಸ್ವಾಮಿಗಳವರ ಸನ್ನಿಧಿಯಲ್ಲಿ ಅರಿಕೆ ಮಾಡಿಕೊಂಡರು. ಮಹಾಸ್ವಾಮಿಗಳವರು ಎಲ್ಲವನ್ನೂ ಕೇಳಿದ ನಂತರ ಭೀಮಪ್ಪನನ್ನು ವಿಚಾರಿಸಿದರು; ಅವನು ತನ್ನ ಸತ್ಯಸಂಗತಿ

ಯನ್ನು ಯಥಾರ್ಥವಾಗಿ ತಿಳಿಸಿದ. ನಂತರ ಕರಣಿಕನನ್ನು ಕೇಳಲಾಗಿ ಅವನು ತನ್ನದೇ ಮಾತು ಸತ್ಯವೆಂದು ಕಾಗದಪತ್ರ ತೋರಿಸಿದ; ಭೀಮಪ್ಪನಿಗೆ ಮತ್ತೆ ಸಿಟ್ಟು ತಾಳಲಾಗಲಿಲ್ಲ. ಏ ಕರಣಿಕ, ನೀನು ಇನ್ನೂ ನಿನ್ನ ಕಾಗದಪತ್ರದ ಸುದ್ದಿ ಬಿಟ್ಟಿಲ್ಲೇನು, ನೀನು ಖರೇ ಇದ್ದರೆ ಸ್ವಾಮಿಗಳವರ ಮುಂದೆ ಆಣೆ ಮಾಡಿ ಹೇಳು ಅಂದ. ಆಗ ಸ್ವಾಮಿಗಳವರು ಭೀಮಪ್ಪನನ್ನು ಸಮಾಧಾನ ಪಡಿಸಿ, ಕರಣಿಕರೇ ನಿಮ್ಮ ಕಾಗದಪತ್ರದಲ್ಲಿ ಏನು ಬರೆದಿದೆ ಎಂಬುದನ್ನು ಸ್ವಲ್ಪ ಓದಿ ಹೇಳಿರಿ ಎಂದು ಅಪ್ಪಣೆಮಾಡಿದರು; ಕರಣಿಕನಿಗೆ ಸಮಾಧಾನ-ವಾಯಿತು.

ಎಲ್ಲರ ಸಮಕ್ಷಮ ತಾನು ತಂದಿದ್ದ ಕಾಗದಪತ್ರವನ್ನು ಓದಲು ಮೊದಲು ಮಾಡಿದ, ಓದ-ಓದುತ್ತ ಅವನ ಬಾಯಿಯೇ ನಿಂತು ಹೋಯಿತು. ಮುಂದೆ ನಾಲಿಗೆಯೇ ಹೊರಳಲಿಲ್ಲ ಎಲ್ಲರಿಗೂ ಆಶ್ಚರ್ಯವಾಯಿತು. ಕರಣಿ-ಕನು ಬೆವೆತು ಹೋಗಿದ್ದ, ಕೈಕಾಲುಗಳು ಥರ-ಥರ ನಡುಗಲಾರಂಭಿಸಿದುವು. ಆಗ ಮಹಾಸ್ವಾಮಿಗಳವರು- ಯಾಕ್ರಿ ಕರಣಿಕರೇ, ಸುಮ್ಮನಾದಿರಲ್ಲ, ನಿಮ್ಮ ಕಾಗದಪತ್ರವನ್ನು ಓದಿರಿ, ಎಂದು ಆಜ್ಞೆಮಾಡಿದರು. ಕರಣಿಕನು ಮರುಮಾತಾಡದೆ ಓಡಿ ಹೋಗಿ ಸ್ವಾಮಿಗಳ ಪಾದಗಳ ಮೇಲೆ ಬಿದ್ದು, ಸ್ವಾಮೀ ನನ್ನದು ಮಹಾಪರಾಧವಾಯಿತು, ಇನ್ನೆಂದಿಗೂ ಇಂತಹಮೋಸದ ಕೆಲಸ ಮಾಡುವುದಿಲ್ಲೆಂದು ಕ್ಷಮೆಯಾಚಿಸಿದ. ಶರಣಾಗತನಾದ ಕರಣಿಕ-ನನ್ನು ಮಹಾಸ್ವಾಮಿಗಳವರು ಕ್ಷಮಿಸಿ ಇನ್ನು ಮುಂದೆ ಇಂತಹ ಕೆಲಸ ಮಾಡಬಾರದೆಂದು ಎಚ್ಚರಿಕೆ ನೀಡಿದರು. ಅವನು ಆಗಲಿ ಮಹಾಸ್ವಾಮಿಗ-ಳವರೆ ಎಂದು ಒಪ್ಪಿಕೊಂಡ. ಆದರೆ, ಕರಣಿಕನು ಕಾಗದವನ್ನು ಓದ-ಓದುತ್ತಾ ಅರ್ಧಕ್ಕೇ ನಿಲ್ಲಿಸಿ, ಸ್ವಾಮಿಗಳವರ ಪಾದಕ್ಕೆ ಬಿದ್ದು ಕ್ಷಮೆಯಾಚಿಸಿದ್ದುದರ ಅರ್ಥ ಯಾರಿಗೂ ತಿಳಿಯಲಿಲ್ಲ; ಎಲ್ಲರೂ ವಿಸ್ಮಯರಾಗಿ ನಿಂತಿದ್ದರು. ನಂತರ ಮತ್ತೊಮ್ಮೆ ಮಹಾಸ್ವಾಮಿಗಳವರು ಕರಣಿಕರವರೇ ಮತ್ತೊಮ್ಮೆ ಕಾಗದ-ವನ್ನು ಪೂರ್ತಿ ಓದಿರಿ ಎಂದು ಅಪ್ಪಣೆ ಮಾಡಿದರು. ಆಗ ಕರಣಿಕನು ಸರಸರ ಓದಲಾರಂಭಿಸಿದ. ಎಲ್ಲರೂ ಏಕಚಿತ್ತದಿಂದ ಕಿವಿಗೊಟ್ಟು ಕೇಳುತ್ತಿದ್ದರು, ಕಾಗದವನ್ನು ಪೂರ್ತಿ ಓದಿ ಮುಗಿಸಿದ, ಆಗ ತಿಳಿಯಿತು. ಕರಣಿಕನಿಗಾದ

ಅನುಭವ. ಕರಣಿಕನು ತನ್ನ ಕೈಯ್ಯಾರೆ ತಾನೇ ಬರೆದಿದ್ದ ನೂರು ನಾಣ್ಯ ಗಳು ಎಂಬ ಬರಹವು ಮಹಾಸ್ವಾಮಿಗಳವರ ಪ್ರಭಾವದಿಂದ ಐವತ್ತು ನಾಣ್ಯಗಳು ಎಂದು ತನಗೆ ತಾನೇ ಬರವಣಿಗೆಯು ಬದಲಾಗಿತ್ತು, ತನ್ನ ಕೈಯ್ಯಾರೆ ತಾನೇ ಬರೆದಿದ್ದ ಬರಹವು ಅದರಲ್ಲೂ ತನ್ನ ಹತ್ತಿರವೇ ಇದ್ದ ಕಾಗದಲ್ಲಿನ ಬರಹವು ನಿಮಿಷಮಾತ್ರದಲ್ಲಿ ಬದಲಾಯಿಸಿರುವುದನ್ನು ನೋಡಿ, ಅವನ ಬಾಯಿಂದ ಮಾತೇ ಹೊರಡಲಿಲ್ಲ. ಆಗ ತಿಳಿಯಿತು ಅವನಿಗೆ ಮಹಾ-ತಪಸ್ವಿಗಳವರ ಪ್ರಭಾವ. ಬಂದಿದ್ದ ಗ್ರಾಮಸ್ಥರೆಲ್ಲರೂ, ಪ್ರತ್ಯಕ್ಷ ಕಂಡ ಈ ಪವಾಡವನ್ನು ನೋಡಿ ಬೆರಗಾದರು. ಮತ್ತೆ-ಮತ್ತೆ ಸಾಷ್ಟಾಂಗ ನಮಸ್ಕಾರ ಮಾಡಿದರು; ಹೂಂ, ಇನ್ನು ನೀವೆಲ್ಲಾ ಹೊರಡಿರಿ. ಎಂದು ಅಪ್ಪಣೆಮಾಡಿ-ದರು. ಹೊರಡುವ ಮುನ್ನ ಕರಣಿಕನು- ಮಹಾಸ್ವಾಮಿಗಳವರ ಸಮಕ್ಷಮ-ದಲ್ಲಿ, ಗ್ರಾಮಸ್ಥರ ಸಮ್ಮುಖದಲ್ಲಿ, ಭೀಮಪ್ಪನ ಜಮೀನನ್ನು ಅವನಿಗೆ ಮರಳಿ ಒಪ್ಪಿಸಿರುವುದಾಗಿ ಹೇಳಿಕೆ ಕೊಟ್ಟದ್ದಲ್ಲದೇ, ಅವನು ಕೊಟ್ಟಿದ್ದ ಐವತ್ತು ಬೆಳ್ಳಿನಾಣ್ಯಗಳನ್ನು ಸಹ ಅವನಿಗೆ ಮರಳಿ ಕೊಟ್ಟುಬಿಟ್ಟ. ಆಗ ಭೀಮಪ್ಪನು, ಆ ಐವತ್ತು ಬೆಳ್ಳಿನಾಣ್ಯಗಳು ನನ್ನವಲ್ಲ, ಇದು ಮಹಾಸ್ವಾ-ಮಿಗಳವರ ಪಾದಕ್ಕೆ ಸಲ್ಲಲಿ ಎಂದು ಪಾದಕ್ಕೆ ಅರ್ಪಿಸಿದ. ಆಗ ಮಹಾ-ಸ್ವಾಮಿಗಳವರು- ಭೀಮಪ್ಪಾ, ಈ ಹಣ ನಮಗೆ ಅವಶ್ಯವಿಲ್ಲ. ಈ ಹಣದಿಂದ ಬಡವರಿಗೆ ಉಣಬಡಿಸು; ನಿನಗೂ ನಿಮ್ಮ ಗ್ರಾಮಕ್ಕೂ ಒಳ್ಳೆಯದಾಗಲಿ ಎಂದು ಆಶೀರ್ವದಿಸಿದರು. ಅದರಂತೆ ಭೀಮಪ್ಪನು ದೀನರಿಗೆ ಉಣಬಡಿಸಿ, ತನ್ನ ಹೊಲವನ್ನು ಮರಳಿಪಡೆದ. ಮುಂದೆ ಕೆಲವೇ ದಿನಗಳಲ್ಲಿ ಅದೇ ಹೊಲವನ್ನು ಉಳುತಿದ್ದಾಗ, ಆ ಸ್ಥಳದಲ್ಲಿ ಅವನಿಗೆ ದೊಡ್ಡ ನಿಧಿಯೊಂದು ದೊರಕಿ, ದೊಡ್ಡ ಶ್ರೀಮಂತನಾದ, ಪ್ರತಿನಿತ್ಯ ತಪ್ಪದೇ, ಮಹಾಸ್ವಾಮಿಗ ಳವರ ದರ್ಶನ ಪಡೆದುಹೋಗುವ ನಿಯಮವನ್ನು ಪಾಲಿಸಿದ. ಅಂದಿನಿಂದ ಪೂಬಳ್ಳಿಯ ಗ್ರಾಮಸ್ಥರು- ಮೋಸ, ಕಳ್ಳತನ, ಮೊದಲಾದ ದುಷ್ಕೃತ್ಯಕ್ಕೆ ಅಂಜುತ್ತಿದ್ದರಲ್ಲದೆ, ಅದರ ಸುದ್ದಿಗೇ ಹೋಗುತ್ತಿರಲಿಲ್ಲ. ಪೂಬಳ್ಳಿಯಲ್ಲಿ ಯಾವದೇ ನ್ಯಾಯವಾಗಲೀ, ಮಹಾಸ್ವಾಮಿಗಳವರ ಹೆಸರೆತ್ತಿದರೆ ಸಾಕು, ಆಗಿಂದಾಗ್ಗೆ ತಪ್ಪಿತಸ್ಥರು ತಮ್ಮ ತಪ್ಪನ್ನು ಒಪ್ಪಿಕೊಂಡುಬಿಡುತ್ತಿದ್ದರು. ಅಂದಿನಿಂದ ಇಂದಿನವರೆಗೂ ಆ ಪದ್ಧತಿ ನಡೆದುಬಂದಿದೆ. ಇಂದಿಗೂ,

ಹುಬ್ಬಳ್ಳಿಯಲ್ಲಿ ಜಗದ್ಗುರು ಗುರುಸಿದ್ಧೇಶ್ವರನ ಗದ್ದುಗೆ ಮುಂದೆ ನಿಂತು, ನಾನು ನಿರಪರಾಧಿಯೆಂದು ಆಣೆಮಾಡಿ ಹೇಳಿದವರನ್ನು ನಿರಪರಾಧಿ ಎಂದು ಬಿಡುಗಡೆ ಮಾಡುವ ಪದ್ಧತಿ ಈಗಲೂ ಉಂಟು. ಇದು ಬಹಳ ಜನರಿಗೆ ತಿಳಿದಿಲ್ಲ; ಆದರೆ ಇದು ಸತ್ಯವಾದ ವಿಷಯ. ಈಗಲೂ ಎಷ್ಟೋ ಜನ ಆಣೆ ಮಾಡಲು ಹುಬ್ಬಳ್ಳಿಗೆ ಬರುತ್ತಾರೆ. ಆದರೆ ಸುಳ್ಳು ಪ್ರಮಾಣ ಮಾಡುವವರಿಗೆ ಇಲ್ಲಿ ಸಾಧ್ಯವಿಲ್ಲ; ಗದ್ದುಗೆಯ ಮುಂದೆ ನಿಲ್ಲಲು ಅವರಿಗೆ ಸಾಧ್ಯವಿಲ್ಲ. ಎಷ್ಟೋ ಜನರು ಇದರಂತೆ ಪ್ರಮಾಣ ಮಾಡಿ ತಪ್ಪಿಸಿಕೊಳ್ಳಲು ಬಂದು, ಗದ್ದುಗೆಯ ಪ್ರಭಾವದಿಂದ ಅವರು ದಿಕ್ಕುತಪ್ಪಿ, ಪಶ್ಚಾತ್ತಾಪಪಟ್ಟು, ತಮ್ಮ ತಪ್ಪನ್ನು ತಾವೇ ಒಪ್ಪಿಕೊಂಡು ಹೋದ ಉದಾಹರಣೆಗಳು ಸಾಕಷ್ಟಿವೆ. ಓದುಗರಿಗೆ ಸಂಶಯವಿದ್ದರೆ, ಹುಬ್ಬಳ್ಳಿ ಮೂರುಸಾವಿರಮಠಕ್ಕೆ ಹೋಗಿ ಈ ವಿಷಯದ ಬಗ್ಗೆ ಕೇಳಿ ತಿಳಿದುಕೊಳ್ಳಬಹುದು.

ಲೇಸ ಕಂಡು, ಬಯಸಿ-ಬಯಸಿ
　　ಆಸೆ ಮಾಡಿದರಿಲ್ಲ ಕಂಡಯ್ಯಾ;
ತಾಳಿಮರಕ್ಕೆ ಕೈಯ್ಯಮಾಡಿ ಮೇಲೆ ನೋಡಿ
　　ಗೋಣು ನೊಂದುದು.

## ಭವಿಷ್ಯ ಹೇಳಿದ ಕಗ್ಗಲ್ಲು:

ಮಹಾಸ್ವಾಮಿಗಳವರಿಂದ ಕ್ಷಮಾದಾನ ಪಡೆದುಬಂದ ಕರಣಿಕನಿಗೆ ಗಂಡು ಮಕ್ಕಳಿರಲಿಲ್ಲ; ಒಬ್ಬಳೇ ಹೆಣ್ಣುಮಗಳಿದ್ದಳು. ನೂರಾರು ಎಕರೆ ಜಮೀನುದಾರನಾಗಿದ್ದು, ಮೇಲಾಗಿ ಗ್ರಾಮದ ಶಾನುಭೋಗನಾಗಿದ್ದರೂ ಅವನ ಮನಸ್ಸಿಗೆ ಸಮಾಧಾನವಿರಲಿಲ್ಲ. ಒಂದು ದಿವಸ ಮಹಾಸ್ವಾಮಿಗಳವರ ದರ್ಶನಕ್ಕೆ ಬಂದು; ತನ್ನ ಮನದ ಇಂಗಿತವನ್ನು ಅರಿಕೆಮಾಡಿಕೊಂಡ. ಆಗ ಮಹಾಸ್ವಾಮಿಗಳವರು, ಅಲ್ಲೇ ಬಿದ್ದಿದ್ದ ಒಂದು ಕಗ್ಗಲ್ಲನ್ನು ತೋರಿಸಿದರು. ನಿನ್ನ ಪತ್ನಿಯು ಪ್ರತಿ ಸೋಮವಾರ ಮಡಿಯಿಂದ ಬಂದು,ಈ ಕಲ್ಲನ್ನು ನೆಗಹುವಂತೆ ಹೇಳು. ಈ ಕಲ್ಲು ಭಾರವಿಲ್ಲದೆ ಸುಲಭವಾಗಿ ಎತ್ತಲು ಎಂದಿಗೆ ಸಾಧ್ಯವೋ, ಅದೇ ವರ್ಷ ಅವಳು ಗಂಡುಮಗುವನ್ನು ಹಡೆಯುತ್ತಾಳೆ ಎಂದು

ಅಪ್ಪಣೆಮಾಡಿದರು. ಕರಣಿಕನು ಅದರಂತೆ ತನ್ನ ಹೆಂಡತಿಗೆ ಬಂದು ತಿಳಿಸಿದ. ಕರಣಿಕನ ಹೆಂಡತಿಯು ಪ್ರತಿಸೋಮವಾರ ತಪ್ಪದೇ ಮಡಿಯಿಂದ ಬಂದು ಕಲ್ಲನ್ನು ಎತ್ತುತ್ತಿದ್ದಳು. ಆದರೆ ನೋಡಲು ಆ ಕಲ್ಲು ಸಣ್ಣದಾಗಿಯೇ ಇದ್ದರೂ, ಸುಲಭವಾಗಿ ಎತ್ತಲು ಸಾಧ್ಯವಾಗುತ್ತಿರಲಿಲ್ಲ. ಇದರಂತೆ ಹದಿನಾರು ಸೋಮವಾರಗಳೂ ತಪ್ಪದೇ ಬಂದಳು .ಹದಿನಾರನೆಯ ಸೋಮವಾರ ನೆಗಹುವಾಗ ಮಲ್ಲಿಗೆಯ ಹೂವಿನಂತೆ, ಸ್ವಲ್ಪವೂ ಭಾರವಿಲ್ಲದೆ ಹಗುರಾಗಿ ಬಂದಿತು. ನಂತರ, ಮಹಾಸ್ವಾಮಿಗಳವರ ಪಾದಕ್ಕೆ ನಮಸ್ಕರಿಸಿ ಬರ-ಬರನೆ ಮನೆಗೆ ಬಂದಳು. ಅವಳ ಆನಂದಕ್ಕೆ ಪಾರವೇ ಇಲ್ಲ. ಗಂಡನ ಮುಂದೆ ಈ ಸಂತೋಷವಾರ್ತೆಯನ್ನು ತಿಳಿಸಿದಳು; ಅವನಿಗೂ ಅಪಾರವಾದ ಆನಂದ-ವಾಯಿತು. ಮಹಾಶಿವಯೋಗೀಶ್ವರರ ಅಪ್ಪಣೆಯಂತೆ ವರ್ಷ ತುಂಬುವದ-ರೊಳಗೆ ಒಂದು ಗಂಡುಮಗುವನ್ನು ಹಡೆದಳು. ಈ ಸುದ್ದಿ ತಿಳಿದ ಗ್ರಾಮದ ಜನರೆಲ್ಲರೂ ಆ ಕಲ್ಲನ್ನು ನೆಗಹಲು ಪ್ರಾರಂಭಿಸಿದರು. ಪ್ರತಿ ಸೋಮವಾರ-ಕ್ಕೊಮ್ಮೆ ಪ್ರಾರಂಭವಾದ ಈ ಕಲ್ಲಿನ ಭವಿಷ್ಯ, ಪ್ರತಿ ದಿವಸವೂ ಜನರನ್ನು ಆಕರ್ಷಿಸಿತು. ಮಕ್ಕಳನ್ನು ಬಯಸುವವರು, ವ್ಯಾಪಾರ, ಉದ್ಯೋಗ, ಮುಂತಾದ ಕಾರ್ಯಗಳನ್ನು ಮಾಡುವವರು, ತಾವು ಕೈಕೊಂಡ ಕಾರ್ಯವು ಸಾಧ್ಯವೋ ? ಅಸಾಧ್ಯವೋ ? ಎಂಬುದನ್ನು ಪರೀಕ್ಷಿಸಿಕೊಳ್ಳಲು ಈ ಕಲ್ಲನ್ನು ಎತ್ತಿ ಭವಿಷ್ಯ ಕೇಳಹತ್ತಿದರು. ಈಗಲೂ ಸಹ, ಹುಬ್ಬಳ್ಳಿ ಮೂರುಸಾವಿರ-ಮಠದಲ್ಲಿ ಕರ್ತೃ ಗದ್ದುಗೆಯ ಮುಂದೆ ಒಂದು ಕಲ್ಲು ಇದೆ; ಇದರ ಮಹತ್ತ್ವ ತಿಳಿದವರೆಲ್ಲರೂ ಬಂದು ಅದರ ಮುಂದೆ ಕುಳಿತು ತಮ್ಮ ಮನಸ್ಸಿನಲ್ಲಿ ಸಂಕಲ್ಪ ಮಾಡಿಕೊಂಡು ಆ ಕಲ್ಲನ್ನು ಎತ್ತುತ್ತಾರೆ. ಅವರ ಸಂಕಲ್ಪ ಸಾಧ್ಯವಾಗಿದ್ದರೆ ಆ ಕಲ್ಲು ಬಹಳ ಹಗುರವಾಗಿ ಕಾಣುತ್ತದೆ; ಕಷ್ಟಸಾಧ್ಯವಾಗಿದ್ದರೆ ಬಹಳ ಭಾರವಾಗಿ ಕಾಣುತ್ತದೆ. ವಾಚಕ ಮಹನೀಯರು ಒಮ್ಮೆ ಹುಬ್ಬಳ್ಳಿ ಮೂರು ಸಾವಿರಮಠಕ್ಕೆ ಬಂದು ಆ ಕಲ್ಲನ್ನು ಎತ್ತಿ, ತಮ್ಮ ಭವಿಷ್ಯವನ್ನು ತಿಳಿದು-ಕೊಳ್ಳಬಹುದು.

ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲವನೆರೆದು,
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು,
ತೊಳಗಿಬೆಳಗುತಿರ್ದುದಯ್ಯ ಶಿವನಪ್ರಕಾಶ !

ಆ ಬೆಳಗಿನೊಳಗೊಪ್ಪುತಿರ್ದ್ದಯ್ಯ ಅಸಂಖ್ಯಾತ ಭಕ್ತಮಹಾಗಣಂಗಳು!
ಶಿವಭಕ್ತರಿರ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೇ ?
ಶಿವಭಕ್ತರಿರ್ದ ದೇಶವು ಪಾವನವೆಂಬುದು ಹುಸಿಯೇ ?
ಗೋಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನ ಬಸವಣ್ಣನ ಕಂಡು
ಬದುಕಿದೆ ಕಾಣಾ ಸಿದ್ಧರಾಮಯ್ಯ !

ಅಲ್ಲಮಪ್ರಭುದೇವರು ಪೂಬಳ್ಳಿಯಿಂದ ಸೊನ್ನಲಗಿಗೆ ಬಂದು ಸಿದ್ಧ-ರಾಮೇಶ್ವರನನ್ನು ಕರೆದುಕೊಂಡು ಕಲ್ಯಾಣಕ್ಕೆ ಬಂದು. ಚೆನ್ನಬಸವಣ್ಣ-ನವಗಿಂದ ಸಿದ್ಧರಾಮೇಶ್ವರರಿಗೆ ದೀಕ್ಷಾ ಸಂಸ್ಕಾರವನ್ನು ಮಾಡಿಸಿ. ಬಸವಣ್ಣನವರ ಹಾಗೂ ಎಲ್ಲ ಶಿವಶರಣರ ಭಕ್ತಿಯ ಕೋರಿಕೆಯಂತೆ ಶೂನ್ಯ ಸಿಂಹಾಸನವನ್ನು ಅಲಂಕರಿಸಿ ಶಿವಾನುಭವ ಮಂಟಪದ ಅಧ್ಯಕ್ಷತೆಯನ್ನು ವಹಿಸಿದರು.

ಆಗಿನ ಕಲ್ಯಾಣ ಪಟ್ಟಣದ ಮಹಿಮೆಯನ್ನು ವರ್ಣಿಸಲು ಅಸದಳ ಶರಣ ಸರೋಜಗಳಿಗೆ ಸರೋವರವಾಗಿತ್ತು ಕಲ್ಯಾಣ. ಅಲ್ಲಿ ಅನುಭವದ ಅಮೃತ ಮಂಥನ ನಡೆಯುತ್ತಿತ್ತು ಬಸವಣ್ಣನವರ ಸಮಾಜ ಸುಧಾರಣೆಯು ವಿಶ್ವಕ್ಕೇ ಮಾರ್ಗದರ್ಶನವಾಗಿತ್ತು. ಬಸವಣ್ಣನವರ ಕಾಯಕವೇ ಕೈಲಾಸ-ವೆಂಬ ಮಂತ್ರದ ಪ್ರಭಾವದಿಂದ, ಶರಣರ ಆಚರಣೆಯಿಂದ ಆರ್ಥಿಕಸ್ಥಿತಿಯು ಗಣನೀಯವಾಗಿ ಪ್ರಗತಿ ಹೊಂದಿತ್ತು ಧಾರ್ಮಿಕ ಸುಧಾರಣೆಯಂತೂ ವಿಶ್ವವನ್ನೇ ಜಾಗೃತಗೊಳಿಸಿತ್ತು. ಬಸವಣ್ಣನವರ ಧಾರ್ಮಿಕ ಸುಧಾರಣೆ-ಯನ್ನೂ ಅವರ ಮಹಿಮೆಯನ್ನೂ ಕೇಳಿ ಭಾರತದ ಮೂಲೆ ಮೂಲೆಗಳಿಂದ ಶರಣರು ಭಕ್ತರು ಜಂಗಮರು ಭಾವುಕರು ರಾಜಾಧಿರಾಜರು ಅನೇಕ ಇತರ ರಾಜ್ಯದ ಅಧಿಕಾರಿಗಳು ಧಾವಿಸಿ ಬಂದರು (ಕಲ್ಯಾಣದತ್ತ) ಮಂತ್ರಿ ಪದವಿ ಯನ್ನು ಸ್ವೀಕರಿಸಿದ ಹನ್ನೆರಡು ವರ್ಷಗಳಲ್ಲಿ ಅವರು ಮಾಡಿದ ಸುಧಾರಣೆ ಗಳನ್ನು ಬೇರೆ ಯಾವ ರಾಷ್ಟ್ರದ ನಾಯಕನೂ ನೂರು ವರ್ಷಗಳು ಅಹೋ ರಾತ್ರಿ ದುಡಿದು ಪ್ರಯತ್ನಿಸಿದರೂ ಸಾಧ್ಯವಾಗದಂತಹ ಅದ್ಭುತ ಪ್ರಗತಿ ಯನ್ನು ಸಾಧಿಸಿ ಅಖಂಡ ಭಾರತದ ಬುದ್ಧಿ ಜೀವಿಗಳ ಜ್ಞಾನಿಗಳ ಮನಸ್ಸನ್ನು ಕಲ್ಯಾಣದ ಕಡೆಗೆ ಆಕರ್ಷಿಸಿದ್ದರು. ಬಸವಣ್ಣನವರು ಮಾಡಿದ ಸುಧಾರಣೆ-

ಗಳಲ್ಲಿ ಬಹಳ ಮುಖ್ಯವಾದ ಮಹತ್ವವಾದ ಸುಧಾರಣೆಯೆಂದರೆ ಅದು ಅಸ್ಪೃಶ್ಯತಾ ನಿವಾರಣೆ ಈ ಒಂದು ವಿಷಯದಲ್ಲಿ ಇಡೀ ವಿಶ್ವವೇ ಬಸವಣ್ಣ-ನವರಿಗೆ ಚಿರಋಣಿಯಾಗಿದೆ. ಆದ್ದರಿಂದಲೇ ಅವರಿಗೆ ವಿಶ್ವಜ್ಯೋತಿ ಬಸವಣ್ಣನವರೆಂಬ ಹೆಸರು ಸಾರ್ಥಕವಾಗಿದೆ. ಆದರೂ ಆ ಕಾಲದಲ್ಲಿ ಬಸವಣ್ಣನವರ ಈ ಅಸ್ಪೃಶ್ಯತಾ ನಿವಾರಣೆಯ ಚಳುವಳಿಗೆ ಸರಿಯಾದ ಸಹಕಾರ ದೊರೆಯಲಿಲ್ಲ ಜನಸಾಮಾನ್ಯರಿಂದ ಸಾಕಷ್ಟು ಬೆಂಬಲ ದೊರೆತಿದ್ದರೂ ಬಸವಣ್ಣನವರ ಕೀರ್ತಿಯನ್ನು, ಕಂಡು ಕೇಳಿ ಸಹಿಸದ ಕೆಲವು ಹಿರಿಯ ವ್ಯಕ್ತಿಗಳು ಅದನ್ನು ವಿರೋಧಿಸಿದರು ಹಾಗೂ ಆಗಿನ ಕಲ್ಯಾಣದ ಭೂಪಾಲನಾಗಿದ್ದ ಬಿಜ್ಜಳ ದೊರೆಯಲ್ಲಿಗೆ ಮೇಲಿಂದ ಮೇಲೆ ದೂರಿಕೊಳ್ಳುತ್ತಿದ್ದರು.

ಈ ಮಧ್ಯೆ ಇಡೀ ಭಾರತದ ಗಮನವನ್ನು ಸೆಳೆಯುವಂತಹ ಒಂದು ಪ್ರಕರಣ ನಡೆಯಿತು. ಮೊದಲು ಬ್ರಾಹ್ಮಣನಾಗಿದ್ದು ನಂತರ ವೀರಶೈವ ದೀಕ್ಷೆಯನ್ನು ಪಡೆದ ಮಧುವರಸನ ಪುತ್ರಿಯೊಂದಿಗೆ, ಸಮಗಾರನಾಗಿದ್ದು ವೀರಶೈವ ದೀಕ್ಷೆಯನ್ನು ಪಡೆದ ಹರಳಯ್ಯನ ಮಗ, ಶೀಲವಂತನ ಮದುವೆ ನಿಶ್ಚಯವಾಯಿತು. ಇದನ್ನು ಬಸವಣ್ಣನವರು ಬಿಚ್ಚುಮನಸ್ಸಿನಿಂದ ಅನುಮೋದಿಸಿದರು. ಆದರೆ ಕಲ್ಯಾಣದ ಮಹಾಪಂಡಿತನೂ ರಾಜಗುರುವೂ ಆಗಿದ್ದ ನಾರಣಕ್ರಮಿತನೂ ವಯೋವೃದ್ಧ ಮಂತ್ರಿಯಾಗಿದ್ದ ಕೊಂಡೆಯ ಮಂಚ-ಣ್ಣನೂ ಇನ್ನೂ ಅವರ ಕೆಲವು ಬೆಂಬಲಿಗರು ಇದನ್ನು ಬಲವಾಗಿ ಖಂಡಿಸಿದರು. ಆದರೂ ಅವರ ಬೆದರಿಕೆಗೆ ಸೊಪ್ಪುಹಾಕದೆ ಬಸವಣ್ಣನವರ ನೇತೃತ್ವದಲ್ಲಿ ಶರಣರು ಆ ಮದುವೆಯನ್ನು ಯಶಸ್ವಿಯಾಗಿ ನಡೆಸಿಯೇ ಬಿಟ್ಟರು. ಇದರಿಂದ ಕುಪಿತನಾದ ನಾರಣಕ್ರಮಿತ ಹಾಗೂ ಅವನ ಬೆಂಬಲಿಗರು ಬಿಜ್ಜಳ ರಾಯನಲ್ಲಿಗೆ ಹೋಗಿ ದೂರನ್ನಿತ್ತು ವರ್ಣ ಸಂಕರದ ತಪ್ಪನ್ನು ಹೊರಿಸಿ ಹರಳಯ್ಯ ಮತ್ತು ಮಧುವಯ್ಯನವರನ್ನು ತಪ್ಪಿತಸ್ಥರೆಂದು ತೀರ್ಮಾನಿಸಿ ನ್ಯಾಯಾಲಯಕ್ಕೆಳೆದರು. ಬಸವಣ್ಣನವರು ಎಷ್ಟು ಸಮಾಧಾನ ಹೇಳಿ ತಿಳಿಸಿದರೂ ಬಿಜ್ಜಳನು ಕೇಳದೆ ಬಸವಣ್ಣನವರ ಮಾತನ್ನು ಅಲಕ್ಷಿಸಿ ನ್ಯಾಯ ವಿಚಾರಣೆಯನ್ನು ಪ್ರಾರಂಭಿಸಿದನು. ಕೂಡಲೇ ಬಸವಣ್ಣನವರು ಮುಖ್ಯ ಮಂತ್ರಿ ಪದವಿಯನ್ನು ತ್ಯಜಿಸಿ ರಾಜೀನಾಮೆಯಿತ್ತು ಹಡಪದಪ್ಪಣ್ಣನವ-

ರೊಂದಿಗೆ ಕಪ್ಪಡಿ ಕ್ಷೇತ್ರಕ್ಕೆ ತೆರಳಿದರು. ಬಸವಣ್ಣನವರು ತಾವು ಕಪ್ಪಡಿಗೆ ತೆರಳುವ ಪೂರ್ವದಲ್ಲಿ ತಮ್ಮ ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಣೆಯ ಜವಾಬ್ದಾರಿಯನ್ನು ತಮ್ಮ ಸೋದರಳಿಯನಾದ ಚೆನ್ನಬಸವಣ್ಣನವರಿಗೆ ಒಪ್ಪಿಸಿಕೊಟ್ಟು ಹೋದರು.

ಬಾರದು ಬಪ್ಪದು, ಬಪ್ಪದು ತಪ್ಪದು.

ಮುಂದೊದಗುವ ಅನಿಷ್ಟಕಾಲವನ್ನು ಅಲ್ಲಮಪ್ರಭುದೇವರು ಮೊದಲೇ ಅರಿತಿದ್ದರು. ಆದ್ದರಿಂದ, ಪ್ರಭುದೇವರು ಈ ಘಟನೆಗೆ ಕೆಲವು ಕಾಲದ ಮುಂಚಿತವಾಗಿಯೇ ಕಲ್ಯಾಣದಿಂದ ನಿರ್ಗಮಿಸಿದ್ದರು. ಅಲ್ಲಮಪ್ರಭುದೇವರು ಸಾಮಾನ್ಯರಲ್ಲ. ಸಾಕ್ಷಾತ್ ಪರಬ್ರಹ್ಮಸ್ವರೂಪರು, ನಿರಂಜನ ಪ್ರಭುವಿನ ಅವತಾರವನ್ನು ತಾಳಿದ ಅನಾದಿ ನಿರಂಜನ, ನಿತ್ಯನಿರಂಜನ ಮಾಯಾಕೋಲಾಹಲ ಸರ್ವಜ್ಞನಾಗಿದ್ದುದರಿಂದ ಎಲ್ಲವನ್ನೂ ಮೊದಲೇ ತಿಳಿದಿದ್ದರು.

ಹೀಗೆ ಅಲ್ಲಮಪ್ರಭುದೇವರು ಕಲ್ಯಾಣದಿಂದ ನಿರ್ಗಮಿಸುವಾಗ, ಚೆನ್ನಬಸವಣ್ಣನವರನ್ನು ಕರೆದು ಅವರಿಗೆ ಶೂನ್ಯಸಿಂಹಾಸನದ ಪಟ್ಟಗಟ್ಟಿ, ಶಿವಾನುಭವ ಮಂಟಪದ ಎಲ್ಲ ಜವಾಬ್ದಾರಿಯನ್ನು ಅವರಿಗೆ ವಹಿಸಿಕೊಟ್ಟು, ಹೊರಡುವ ಮುನ್ನ ಚೆನ್ನಬಸವಣ್ಣನವರನ್ನು ಏಕಾಂತಕ್ಕೆ ಕರೆದುಕೊಂಡು ಹೋಗಿ, ಗುಪ್ತವಾಗಿ ಕೆಲವು ಮಹತ್ತ್ವವಾದ ವಿಷಯಗಳನ್ನು ನಿರೂಪಿಸಿದರು.

ಇರಿಸಿಕೊಂಡು ಶರಣರಾದವರೆಮ್ಮವರು;  
ಕೊರೆಸಿಕೊಂಡು ಶರಣರಾದವರೆಮ್ಮವರು.

## ಗುಪ್ತ ಸಂದೇಶ :

ಚೆನ್ನಬಸವಣ್ಣನವರೇ, ಮುಂದೆ ಕಲ್ಯಾಣದಲ್ಲಿ ಮಹಾ ಕದನವಾಗುವದು. ನೆತ್ತರಕೋಡಿ ಹರಿಯುವುದು, ಶರಣ ಜಂಗಮರಿಗೆ ಅನಂತ ಕಷ್ಟಗಳೊದಗುವವು, ಅವರ ಪ್ರಾಣಭಯವೂ ತಪ್ಪಿದ್ದಲ್ಲ. ಎಲ್ಲಕ್ಕೂ ಮಿಗಿಲಾಗಿ, ನಾವೆಲ್ಲಾ ಶರಣರು, ಬಹಳ ಪರಿಶ್ರಮವಹಿಸಿ ಸಾಧಿಸಿದ ತತ್ತ್ವಾನುಭವದ

ಅಮೂಲ್ಯ ವಚನ ಸಂಗ್ರಹಗಳನ್ನೂ ಭವಿಗಳು ನಾಶಮಾಡಲು ಹಿಂಜರಿಯು ವದಿಲ್ಲ. ಆದ್ದರಿಂದ, ನಿಮ್ಮೆಲ್ಲರಿಗೆ ನನ್ನ ಮುಖ್ಯವಾದ ಒಂದು ಸಂದೇಶ-ವೇನೆಂದರೆ—

ಶರಣರ ವಚನ ಸಾಹಿತ್ಯವು ಸಾಮಾನ್ಯವಾದುದಲ್ಲ. ನಾವೆಲ್ಲರೂ ಬಹಳ ಶ್ರಮವಹಿಸಿ ಸಂಗ್ರಹಿಸಿರುವ, ಅನುಭಾವದ ರಸಗಟ್ಟಿಯಂತಿರುವ ಮಹತ್ತ್ವವಾದ ತಾಡೋಲೆ (ವಚನ ಸಾಹಿತ್ಯ) ಗಳನ್ನು ಬಹಳ ಜಾಗರೂಕತೆಯಿಂದ ಸಂರಕ್ಷಣ ಮಾಡುವಲ್ಲಿ, "ಜಾತಸ್ಯ ಮರಣಂ ಧ್ರುವಂ" ಎಂಬಂತೆ ಪ್ರಾಣಾರ್ಪಣೆ ಮಾಡಲು ಹಿಂಜರಿಯಬಾರದು. ಯಾಕಂದರೆ ನಮ್ಮ ಮುಂದಿನ ಪೀಳಿಗೆಗೆ ಇದೇ ಮಾರ್ಗದರ್ಶನ, ಇದೇ ಆಧಾರ, ಇದೇ ಪ್ರಮಾಣ, ಇದೇ ದಾರಿದೀಪವಾಗಿರುತ್ತದೆ. ಅದಕ್ಕಾಗಿ, ನಮ್ಮೆಲ್ಲ ಶರಣರು ಪ್ರಾಣಾರ್ಪಣೆ ಮಾಡಿದರೂ ಶರಣ ಧರ್ಮಕ್ಕೆ ಯಾವ ಹಾನಿಯು ತಟ್ಟುವದಿಲ್ಲ, ಯಾವ ಕುಂದು-ಕೊರತೆಗಳು ಸಂಭವಿಸುವದಿಲ್ಲ. ಮತ್ತೆ ಕೋಟ್ಯಾಂತರ ಶರಣರು ಅವತಾರ ತಾಳಿ, ಶರಣ ಧರ್ಮದ ಧ್ವಜವನ್ನು ಎತ್ತಿಹಿಡಿಯಬಹುದು. ಆದರೆ, ವಚನ ಸಾಹಿತ್ಯದ ತಾಡೋಲೆಗಳು ನಾಶವಾದರೆ ಮಾತ್ರ, ನಮ್ಮ ಶರಣ ಧರ್ಮವು ಉಳಿಯಲು ಸಾಧ್ಯವಿಲ್ಲ. ಆದುದರಿಂದ ನಮ್ಮ ವಚನ ಸಾಹಿತ್ಯಗಳ ತಾಡೋಲೆಗಳನ್ನು ರಕ್ಷಿಸುವುದು ಆದ್ಯ ಕರ್ತವ್ಯ.

**ಉದಾಹರಣೆಗೆ:— ಕೆಳಗಿನ ಟಿಪ್ಪಣಿಗಳಲ್ಲಿ**

ಆಚಾರ್ಯತ್ರಯರಾದ ಶಂಕರ, ಮಧ್ವ, ರಾಮಾನುಜರು ಪ್ರಸ್ಥಾನತ್ರ-ಯಿಗಳಿಗೆ ಬರೆದಿದ್ದ ಭಾಷ್ಯಗಳನ್ನು ಅವರ ಅನುಯಾಯಿಗಳು ಇನ್ನೂವರೆಗೆ ಬಹಳ ಜಾಗ್ರತೆಯಿಂದ ಕಾಪಾಡಿಕೊಂಡು ಬಂದಿರುವುದರಿಂದಲೇ, ಈಗಿನ ವಿಜ್ಞಾನ ಯುಗದಲ್ಲಿ ಅವರು ಎದೆ ಮುಂದೆಮಾಡಿ, ತಲೆಯೆತ್ತಿ ನಡೆಯುತ್ತಿದ್ದಾರೆ.

ಎರಡನೆಯದಾಗಿ ಕೇವಲ ವಚನ ಸಂಗ್ರಹಗಳನ್ನು ರಕ್ಷಿಸಿ ಅವುಗಳ ನಿಜವಾದ ಅನುಭಾವವನ್ನು ಅರಿತ ಅನುಭಾವಿಗಳ ಕೊರತೆಯಾದರೆ ಮುಂದೆ ವಚನ ಸಾಹಿತ್ಯಕ್ಕೆ ಅನನುಭವಿಗಳು ಅಪಾರ್ಥಗಳನ್ನು ಕಲ್ಪಿಸಿ ಶರಣಧರ್ಮದ

ಮೂಲ ಸ್ವರೂಪವನ್ನೇ ಮುಂದಿನವರು ಬುಡಮೇಲುಮಾಡಿಬಿಡಬಹುದು, ಅಥವಾ ಬಸಲಾಯಿಸಬಹುದು, ಆದುದರಿಂದ ಆ ವಚನಗಳ ಸಾಹಿತ್ಯದ ಅರ್ಥವನ್ನೂ, ಅದರೊಳಗಡಗಿರುವ ಅರ್ಥಗರ್ಭಿತವಾದ ಅನುಭಾವವನ್ನೂ, ಅರಿತು, ನುರಿತ ಅನುಭಾವಿಗಳಾದ, ಶರಣ, ಜಂಗಮರ, ಸಂರಕ್ಷಣೆಯೂ ಅಷ್ಟೇ ಅತ್ಯವಶ್ಯವಾದುದು; ಆದುದರಿಂದ ಚೆನ್ನಬಸವಣ್ಣನವರೇ ಈ ವಿಷಯದಲ್ಲಿ ಬಹಳ ಜಾಗರೂಕರಾಗಿರಬೇಕು, ಈ ನನ್ನ ಸಂದೇಶವನ್ನು ತಾವು ಈಡೇರಿಸಿಕೊಡುತ್ತೇನೆಂದು ಪ್ರತಿಜ್ಞೆ ಮಾಡುವವರೆಗೂ ನನ್ನಮನಸ್ಸಿಗೆ ಸಮಾಧಾನವಿಲ್ಲ.

**ಚೆನ್ನಬಸವಣ್ಣನವರು:—** ಪ್ರಭುವೇ ತ್ರಾಹಿ ತ್ರಾಹಿ ಕ್ಷಮಿಸಬೇಕು. ಮಹಾನುಭಾವಿಗಳೂ, ವಯೋವೃದ್ಧರೂ, ಜ್ಞಾನವೃದ್ಧರೂ, ಆದ ತಾವು ಈ ರೀತಿ ಹೇಳಬಾರದು. ಇದು ತಮ್ಮ ಸಂದೇಶಮಾತ್ರವಲ್ಲ ಇದು ತಮ್ಮ ಮಹದಾಜ್ಞೆಯೆಂದು ಶಿರಸಾವಹಿಸಿ ಪಾಲಿಸುತ್ತೇನೆ, ಇದು ಸಾಮಾನ್ಯವಾದ ಸಂದೇಶವಲ್ಲ ಇದು ನಮ್ಮ ಇಂದಿನ-ಮುಂದಿನ ಕೋಟ್ಯಾನು ಕೋಟಿ ಶರಣರ ಬೇಡಿಕೆಯಾಗಿದೆ. ಈ ಕೋರಿಕೆಯನ್ನು ಈಡೇರಿಸಿಕೊಡುವ ದಾತರೂ ತಾವೇ ಆಗಿರುವಿರಿ.

**ಪ್ರಭುದೇವರು:—** ಚೆನ್ನಬಸವಣ್ಣನವರೇ ತಾವು ನುಡಿದಂತೆ ನಡೆಯುವವರು. ಶರಣ ಧರ್ಮದ ಉದ್ಧಾರಕರಲ್ಲೊಬ್ಬರು ಮೇಲಾಗಿ ಶರಣ ಜಂಗಮರ ಪ್ರೇಮಿಯಾದ ಬಸವಣ್ಣನವರಿಗೆ ಅತ್ಯಂತ ಪ್ರೀತಿ ಪಾತ್ರರು, ತಾವು ಈ ಪ್ರತಿಜ್ಞೆಯನ್ನು ಸ್ವೀಕರಿಸಿದರೆ ಮುಂದೆ ಈ ಮಹತ್ಕಾರ್ಯವನ್ನು ತಾವು ಸಾಧಿಸಿಯೇ ತೀರುವಿರಿ ಎಂಬ ಆತ್ಮವಿಶ್ವಾಸ ನಮಗಿದೆ, ನನ್ನ ಮನಸ್ಸಿಗೆ ಸಮಾಧಾನವಾಗುವದಷ್ಟೇ ಅಲ್ಲ ಶರಣಧರ್ಮಕ್ಕಾಗಿ, ಮಾನವಕುಲ ಉದ್ಧಾರಕ್ಕಾಗಿ, ಹಗಲಿರುಳೂ ಅವಿಶ್ರಾಂತವಾಗಿ ದುಡಿದ ಮಹಾತ್ಯಾಗಿ ಮಹಾನುಭಾವಿ, ಮಹಾತ್ಮನಾದ ಬಸವಣ್ಣನವರ ಆತ್ಮಕ್ಕೂ ಶಾಂತಿ. ಬಸವಣ್ಣನವರು ನಮಗಾಗಿ ಪಟ್ಟ ಕಷ್ಟಕ್ಕೆ ನಾವೆಲ್ಲಾ ಋಣಿಯಾಗಿದ್ದೇವೆ. ಈ ಒಂದು ಮಹತ್ಕಾರ್ಯವನ್ನಾದರೂ ಸಾಧಿಸಿ ಆದಷ್ಟು ನಾವುಋಣ ಮುಕ್ತರಾಗೋಣವೆಂಬುದೇ ನನ್ನ ಹಿರಿಯಾಸೆ ಎಂದು ಪ್ರಭುದೇವರು ಅಪ್ಪಣೆ ಮಾಡಿದರು.

**ಚೆನ್ನಬಸವಣ್ಣನವರು:**–ಪ್ರಭುದೇವಾ ತಮ್ಮ ಮಹಾದಾಜ್ಞೆಯನ್ನು ಶಿರಸಾವಹಿಸಿ ಚಾಚೂ ತಪ್ಪದೆ ಪಾಲಿಸುತ್ತೇನೆ. ಆದರೆ ತಮ್ಮ ಕೃಪಾಶೀರ್ವಾದ ಒಂದು ಮಾತ್ರ ಬಲವಾಗಿರಬೇಕು, ಇದು ನನ್ನ ಆದ್ಯ ಕರ್ತವ್ಯ. ಆದರೆ ಬಸವಣ್ಣನವರು ತಾವು ಸಾಧಿಸಬೇಕೆಂದಿದ್ದ ಲೋಕಕಲ್ಯಾಣ ಕಾರ್ಯವು ಪೂರ್ತಿಯಾಗಲಿಲ್ಲವಲ್ಲಾ ಎಂಬುದನ್ನು ಸ್ಮರಿಸಿಕೊಂಡರೆ ಮಾತ್ರ ನನಗೆ ಬಹಳ ದುಃಖವಾಗುತ್ತದೆ,

೧. ತಾವು ಮಾಡಬೇಕಾಗಿದ್ದ ಸರ್ವಪ್ರಯತ್ನಗಳನ್ನೆಲ್ಲಾ ಮಾಡಿದರು.
೨. ತಾವು ಮಾಡಬೇಕಾಗಿದ್ದ ಸರ್ವತ್ಯಾಗಗಳನ್ನೂ ಮಾಡಿದರು, ಪರಧರ್ಮಿಯರ ಮನಸ್ಸು ನೋಯಿಸದಂತೆ ಸ್ವ-ಧರ್ಮವನ್ನು ಉದ್ಧರಿಸಿದರು,
೩. ಪ್ರಪಂಚದಲ್ಲಿದ್ದು ಪರಮಾರ್ಥದ ತುಟ್ಟತುದಿಯನ್ನೇರಿದರು.
೪. ಮಾನವನಾಗಿ ಅವತರಿಸಿ ಮಹಾದೇವನಿಗೂ ಅಸಾಧ್ಯವಾದ ಅಸ್ಪೃಶ್ಯತಾ ನಿವಾರಣೆಯನ್ನು ಕೈಗೊಂಡು ಯಶಸ್ವಿಯಾದರು.
೫. ಇದಕ್ಕೆ ಸಾಕ್ಷಿಯಾಗಿ ದಯೆಯಿಲ್ಲದ ಧರ್ಮ ಅದೇವುದಯ್ಯಾ ಎಂದು ಸಾರಿದರು.
೬. ಲೋಕದ ಮಾನವರು ಸೋಮಾರಿಗಳಾಗಬಾರದೆಂದು ಕಾಯಕವೇ ಕೈಲಾಸವೆಂಬ ಮಂತ್ರವನ್ನು ಬೋಧಿಸಿದರು.

ಇಷ್ಟೆಲ್ಲಾ ಮಹತ್ಕಾರ್ಯಗಳನ್ನು ಸಾಧಿಸಿ ಆಚರಣೆಯಲ್ಲಿ ತಂದಿದ್ದರೂ:

ತಾನೋರ್ವ ಸಮಾಜ ಸುಧಾರಕನೆಂದಾಗಲೀ
ತಾನೋರ್ವ ಮತಸ್ಥಾಪಕನೆಂದಾಗಲೀ
ತಾನೋರ್ವ ದಾರ್ಶನಿಕನೆಂದಾಗಲೀ
ತಾನೋರ್ವ ಆಚಾರ್ಯನೆಂದಾಗಲೀ

ಕನಸುಮನಸಿನಲ್ಲೂ ಭಾವಿಸಲಿಲ್ಲ. ತಾನು ಬಿಜ್ಜಳನ ಪ್ರಧಾನಿಯಾಗಿದ್ದರೂ ಒಂದು ದಿವಸವಾದರೂ ಅಧಿಕಾರ ದರ್ಪವನ್ನು ಪ್ರದರ್ಶಿಸಲಿಲ್ಲ. ಎನಗಿಂತ ಕಿರಿಯರಿಲ್ಲ. ಶಿವಶರಣರಿಗಿಂತ ಹಿರಿಯರಿಲ್ಲ. ಎನ್ನಮನಸ್ಸಾಕ್ಷಿ ಎಂಬ ವಚನವೇ ಇದಕ್ಕೆ ಸಾಕ್ಷಿ. ಇಷ್ಟಾದರೂ ಬಸವಣ್ಣನವರಿಗೆ ಸಮಾಧಾನವಿಲ್ಲ; ಇಡೀ

ವಿಶ್ವದ ಮಾನವರನ್ನೆಲ್ಲಾ ಒಂದೇ ಕುಟುಂಬದವರನ್ನಾಗಿರಿಸಿ ವಿಶ್ವಕಲ್ಯಾಣ ವನ್ನು ಸಾಧಿಸಬೇಕೆಂಬ ಹಿರಿಯಾಸೆ ಇಟ್ಟುಕೊಂಡಿದ್ದ ವಿಶ್ವಕುಟುಂಬಿಯಾದ ಮಹಾನುಭಾವರವರು.

ಇವೆಲ್ಲವುಗಳಿಗಿಂತಲೂ ಹಿರಿಯಾಸೆಯೊಂದಿತ್ತವರಿಗೆ ಶರಣಧರ್ಮವು ಸರ್ವಧರ್ಮಗಳ ಸಾರವೆಂಬುದನ್ನು ಜಗತ್ತಿಗೆ ಸಾರಲು ಪ್ರಸ್ಥಾನತ್ರಯಿಗಳಿಗೆ ಷಟ್‌ಸ್ಥಲ ಸಿದ್ಧಾಂತವ ಪ್ರಕಾರ ಭಾಷ್ಯವನ್ನು ಬರೆಯಲು ನನಗೆ ಅಪ್ಪಣೆ ಮಾಡಿದ್ದರು. ಆದರೆ ಅಷ್ಟರಲ್ಲಿಯೇ ಗಂಡಾಂತರ ಒದಗಿಬಂದದ್ದರಿಂದ ಆ ಮಹಾಕಾರ್ಯವು ಅಸಾಧ್ಯವಾಯಿತು. ಇದೊಂದೇ ಅವರ ಮನಸ್ಸಿನಲ್ಲಿ ಅಸಮಾಧಾನವಾಗಿ ಪರಿಣಮಿಸಿತು. ಅವರು ಸಾಕಿ ಸಲಹಿದ ಶರಣಧರ್ಮವನ್ನು ನಾಶಮಾಡಬೇಕೆಂದು ಸಂಕಲ್ಪಮಾಡಿರುವವರು ಕೇವಲ ಅಜ್ಞಾನಿಗಳೇ ಸರಿ, ಅವರನ್ನು ನಾನು ಬೇರೆ ಯಾವ ಶಬ್ದಗಳಿಂದಲೂ ನಿಂದಿಸಲಿಚ್ಛಿಸುವುದಿಲ್ಲ, ಅವರು ಮತ್ಸರಿಗಳೆಂದು ಕೆಲವರೆನ್ನಬಹುದು, ದುರ್ಮಾರ್ಗಿಗಳೆಂದು ಕೆಲ ವರೆನ್ನಬಹುದು, ಅಥವಾ ಮಹಾಪಾಪಿಗಳೆಂದು ಹೇಳಬಹುದು, ಆದರೆ ಇವು ಗಳನ್ನೆಲ್ಲಾ ನಾನು ಒಪ್ಪುವುದಿಲ್ಲ. ಒಟ್ಟಿನಲ್ಲಿ ಅವರು ಅಜ್ಞಾನಿಗಳೆಂದು ಮಾತ್ರ ನಿಃಸಂಶಯವಾಗಿ ಹೇಳಬಲ್ಲೆ. ಆದರೆ ಸಾಮಾನ್ಯ ಅಜ್ಞಾನಿಗಳಿಂದ ನಮ್ಮ ಶರಣ ಧರ್ಮವು ನಾಶವಾಗುವುದೆಂಬ ಮಾತನ್ನು ನಾನು ಒಪ್ಪುವು ದಿಲ್ಲ; ಅದು ಗಗನ ಕುಸುಮದಂತೆ ಮಿಥ್ಯವಾದುದು. ಈ ಕ್ಷುಲ್ಲಕ ಜನರಿಂದ ಪರಮ ಪವಿತ್ರವಾದ ಷಟ್‌ಸ್ಥಲ ಸಿದ್ಧಾಂತದ "ಶರಣ ಧರ್ಮವು ಎಂದಿಗೂ ನಾಶವಾಗದು" ಅವರ ಈ ಪ್ರಯತ್ನದಿಂದ ಮತ್ತಷ್ಟು ಚೇತರಿಸಿಕೊಂಡು ಕೆಲವೇ ದಿನಗಳಲ್ಲಿ ವಿಶ್ವವ್ಯಾಪಿಯಾಗಿ ವಿಶ್ವಧರ್ಮವಾಗುವುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ.

## ಚೆನ್ನಬಸವಣ್ಣನವರ ಪ್ರತಿಜ್ಞೆ

ಹೀಗೆಂದು ಚೆನ್ನಬಸವಣ್ಣನವರು ಪ್ರತಿಜ್ಞೆ ಮಾಡಿದ್ದಾರೆ.

ಪ್ರಭುದೇವಾ! ಇಂದೇ, ಈಗಲೇ ತಮ್ಮ ಪವಿತ್ರ ಸನ್ನಿಧಿಯಲ್ಲಿ ಪ್ರತಿಜ್ಞೆ ಮಾಡುತ್ತಿದ್ದೇನೆ. ತಮ್ಮ ಆಜ್ಞಾನುಸಾರವಾಗಿ, ಶರಣರ ವಚನ ಸಾಹಿತ್ಯದ

ತಾಡೋಲೆಗಳನ್ನೂ, ನನ್ನ ಮಾತನ್ನು ಮನ್ನಿಸಿ, ನನ್ನ ಬೆಂಬಲಿಗರಾಗಿ ನನ್ನನ್ನು ಹಿಂಬಾಲಿಸಿದ ಶರಣ ಜಂಗಮರನ್ನೂ, ಯಾವತರದ ಅಪಾಯ ವಿಲ್ಲದೆ ಬಿಜ್ಜಳನ ಸೈನ್ಯದವರ ದಾಳಿಯಿಂದ ಪಾರುಮಾಡಿ, ಸುರಕ್ಷಿತವಾದ ಪ್ರದೇಶಕ್ಕೊಯ್ದು, ಮತ್ತೆ ಬಸವಣ್ಣನವರ ಶರಣ ಧರ್ಮವನ್ನು ಜಗತ್ತಿಗೆ ಸಾರುತ್ತೇನೆ. ಇದು ತಮ್ಮ ಪಾದಸಾಕ್ಷಿಯಾಗಿ ಮಹಾತ್ಮರಾದ ಬಸವಣ್ಣನ ವರ ಪಾದಸಾಕ್ಷಿಯಾಗಿ ಮಾಡಿದ ಪ್ರತಿಜ್ಞೆ

ಆದರೆ, ಈ ಕಾರ್ಯಕ್ಕೆ ತಮ್ಮ ಮತ್ತು ಪೂಜ್ಯರಾದ ಬಸವಣ್ಣನವರ ಸಂಪೂರ್ಣವಾದ ಕೃಪಾಶೀರ್ವಾದ ಮಾತ್ರ ಅತ್ಯಂತ ಅವಶ್ಯ. ಅದನ್ನು ಕರುಣಿಸಿ ಕೃತಾರ್ಥನನ್ನಾಗಿ ಮಾಡಬೇಕು ಎಂದು ಸಾಷ್ಟಾಂಗ ಪ್ರಣಾಮಂಗಳ ನರ್ಪಿಸಿದರು.

**ಪ್ರಭುದೇವರು:—** ಧನ್ಯ ಧನ್ಯ ಚಿಕ್ಕದಣ್ಣಾಯಕರೇ! ಧನ್ಯ ಧನ್ಯ, ನಿಮ್ಮ ಪ್ರತಿಜ್ಞೆ ಈಡೇರಲಿ! ಶರಣ ಧರ್ಮಕ್ಕೆ ಜಯವಾಗಲಿ !!

ಆದರೆ,ತಾವು ತಿಳಿದಿರುವಂತೆ ಈ ಕಾರ್ಯವು ಸುಲಭಸಾಧ್ಯವಾದುದಲ್ಲ. ವಿರೋಧಿಗಳ ಕೈಯ್ಯಲ್ಲಿ ಅಧಿಕಾರವಿದೆ; ಅವರಿಗೆ ಸಮಯವೂ ಅನುಕೂಲವಿದೆ. ಯುದ್ಧ ಕಲೆಯಲ್ಲಿ ಪಳಗಿದ ನಿಪುಣರಾದ ಸೈನ್ಯಾಧಿಕಾರಿಗಳಲ್ಲದೆ, ಲಕ್ಷಾಂತರ ಸುಸಜ್ಜಿತ ಶಸ್ತ್ರಧಾರಿಗಳ ಸೈನ್ಯಬಲವಿದೆ. ಆದರೆ, ನಮ್ಮ ಶರಣರಾದರೂ ಅಹಿಂಸಾ ತತ್ತ್ವದಲ್ಲಿ ನಿರತರಾದವರು. ಇಂಥ ಕಠಿಣಪ್ರಸಂಗದ ವಿಷಮ ಸಮಸ್ಯೆ ಬರುವುದೆಂಬ ಕಲ್ಪನೆ ಸಹ ಇಲ್ಲದವರು; ಸದಾ ಲಿಂಗಾನಂದದಲ್ಲೇ ತಲ್ಲೀನರಾದವರು. ಇಂಥಹ ತದ್ವಿರುದ್ಧ ಪರಿಸ್ಥಿತಿಯನ್ನು ಅಥವಾ ಇಂಥಹ ಸಂದಿಗ್ಧ ಪರಿಸ್ಥಿತಿಯನ್ನು ಬಹಳ ಜಾಗರೂಕತೆಯಿಂದ, ಬಹಳ ಜಾಣ್ಮೆಯಿಂದ, ಅನುಭಾವಿಗಳ ಸಮಾಲೋಚನೆಯಿಂದ, ಎಲ್ಲರ ಒಕ್ಕಟ್ಟಿನಿಂದ, ಎಲ್ಲಕ್ಕೂ ಮಿಗಿಲಾಗಿ ನಿಮ್ಮೆಲ್ಲರ ತಪಃಪ್ರಭಾವದಿಂದ, ಶರಣ ಧರ್ಮದ ಮೇಲೆ ಸಂಪೂರ್ಣ ವಿಶ್ವಾಸದಿಂದ ಮಾತ್ರ ಸಾಧಿಸಬಹುದು. ಆದ್ದರಿಂದ, ಅಂತಹ ಪ್ರಸಂಗದಲ್ಲಿ ತಮಗೆ ಸೂಕ್ತ ಸಲಹೆಗಳನ್ನು ನೀಡಿ, ಸದಾ ತಮ್ಮ ಬೆಂಗಾವಲಿಗರಾಗಿ ತಮ್ಮ ಭುಜಕ್ಕೆ-ಭುಜ ಕೊಟ್ಟು ಹೋರಾಡಲು ಸಮರ್ಥರಾದವರು ನಮ್ಮ ಈ ಮಡಿವಾಳ ಮಾಚಿದೇವರು; ಇವರು ತಮಗೆ ಆಪತ್ಬಾಂಧವರಾಗಿದ್ದಾರೆ.

ಆದುದರಿಂದ, ತಾವು ಮಾಚಿದೇವರನ್ನು ಕ್ಷಣಕಾಲವೂ ಅಗಲದೇ, ಅವರ ನೇತೃತ್ವದಲ್ಲಿ ಮುಂದಿನ ಎಲ್ಲ ಕೆಲಸಗಳನ್ನೂ ನಡೆಸಿರಿ.

ಏನು ಮಾಚಿದೇವರೇ, ನಮ್ಮ ನಿರ್ಣಯ ತಮಗೆ ಸಮ್ಮತವಷ್ಟೇ ?

**ಮಡಿವಾಳಮಾಚಯ್ಯ:—** ಪ್ರಭುದೇವಾಧನ್ಯೋಸ್ಮಿ ವಯೋವೃದ್ಧನಾದ ನನ್ನ ಮೇಲೆ ಇಷ್ಟು ಕೃಪಾದೃಷ್ಟಿ ಇಟ್ಟು, ನನ್ನ ಅಂತ್ಯಕಾಲದಲ್ಲಿ ಇಂತಹ ಮಹತ್ತ್ವವಾದ, ಪವಿತ್ರವಾದ ಸೇವೆಯನ್ನು ಕರುಣಿಸಿದ್ದಕ್ಕೆ ಅನಂತಕೋಟಿ ಶಿರಸ್ಸಾಷ್ಟಾಂಗ ಪ್ರಣಾಮಂಗಳು. ನಾನು ಕೃತಾರ್ಥನಾದೆ. ಇಂದು ನಾನು ಧನ್ಯನಾದೆ.

**ಪ್ರಭುದೇವರು:—** ಮಾಚಿದೇವರೇ, ನನ್ನ ಮಾತನ್ನು ಮಂತ್ರವೆಂದು ತಿಳಿದು ಒಪ್ಪಿದ್ದಕ್ಕೆ ಪರಮಸಂತೋಷವಾಯಿತು. ತಮ್ಮ ಮುಂದಿನ ಎಲ್ಲ ಪ್ರಯತ್ನಗಳೂ ಯಶಸ್ವಿಯಾಗಲಿ, ಶರಣ ಧರ್ಮಕ್ಕೆ ಜಯವಾಗಲಿ.

**ಚೆನ್ನಬಸವಣ್ಣನವರು:—** ಪ್ರಭುದೇವಾ! ನಾವು ಕಲ್ಯಾಣವನ್ನು ತೊರೆದು, ಹೋದನಂತರ, ಮತ್ತೆ ಶರಣ ಧರ್ಮದ ಪ್ರಸಾರಕ್ಕಾಗಿ ಕಲ್ಯಾಣದ ನಂತರ, ಮತ್ತೊಂದು ಪವಿತ್ರವಾದ ಹಾಗೂ ಗಂಡಾಂತರ ಸಮಯದಲ್ಲೂ ಯಾರ ಭಯವಿಲ್ಲದೆ ಧರ್ಮಪ್ರಚಾರ ಮಾಡಲು, ಸುರಕ್ಷಿತವಾದ ಮತ್ತೊಂದು ಪವಿತ್ರ ಸ್ಥಾನವನ್ನು ತಮಗೆ ತಿಳಿದಹಾಗೆ ಎಲ್ಲಾದರೂ ಇದ್ದರೆ, ಕೃಪೆಮಾಡಿ ಅಪ್ಪಣೆ ಕೊಡುವದಾಗಬೇಕು. ಹಾಗೂ ಮತ್ತೊಂದು ನನ್ನ ವೈಯಕ್ತಿಕವಾದ ಅರಿಕೆಯಿದೆ.

**ಪ್ರಭುದೇವರು:-** ಅದೇನು ಚನ್ನಬಸವಣ್ಣನವರೇ ವೈಯಕ್ತಿಕವಾದ ಮಾತು. ತಮ್ಮ ಜೀವನದಲ್ಲೇ ಇದು ಮೊದಲನೆಯ ಸಲ ತಾವು ಈ ಶಬ್ದವನ್ನು ನುಡಿದದ್ದು ವೈಯಕ್ತಿಕವಾಗಿ ತಾವು ಯಾವದೇ ಮಾತಾಡಿಲ್ಲ, ಯಾವದೇ ಸ್ವಾರ್ಥದ ಕಾರ್ಯಮಾಡಿಲ್ಲ ಇಂದೇಕೆ ಈ ರೀತಿ.

**ಚೆನ್ನಬಸವಣ್ಣನವರು:—** ಅಂತಹ ಯಾವ ರಹಸ್ಯವಾದ ಕಾರ್ಯಕ್ಕಾಗಿ ಅಲ್ಲ, ತಮ್ಮಂಥಹ ಮಹಾ ವೈರಾಗ್ಯ ಪುರುಷರನ್ನೂ, ಬಸವಣ್ಣನವ-

ರಂಥಹ ಮಹಾತ್ಮರನ್ನೂ ಅಗಲಿ ದೂರವಾದ ಮೇಲೆ ಇನ್ನು ನಾನು ಈ ಭೂಲೋಕದಲ್ಲಿ ಬಹಳ ದಿವಸಗಳು ಇರಲು ಇಚ್ಛಿಸುವದಿಲ್ಲ; ಆದ್ದರಿಂದ ತಮ್ಮ ಆಜ್ಞಾನುಸಾರವಾಗಿ ಜಂಗಮರನ್ನೂ, ವಚನ ಸಾಹಿತ್ಯಗಳನ್ನೂ ಒಂದು ಸುರಕ್ಷಿತವಾದ ಸ್ಥಳಕ್ಕೆ ಮುಟ್ಟಿಸಿ ಮಾಚಿದೇವರ ಹಾಗೂ ಎಲ್ಲ ಶಿವಶರಣರ ಅಪ್ಪಣೆ ಪಡೆದು ನಾನು ನನ್ನ ಅವತಾರ ಕಾರ್ಯವನ್ನು ಆದಷ್ಟು ಬೇಗ ಮುಗಿಸಬೇಕೆಂದಿದ್ದೇನೆ. ಆದ್ದರಿಂದ ಶರಣ ಜಂಗಮರ,ಹಾಗೂ ವಚನ ಸಾಹಿತ್ಯಗಳಿಗೆ ಒಂದು ಸುರಕ್ಷಿತವಾದ ಸ್ಥಳವನ್ನೂ, ಎರಡನೆ ಯದಾಗಿ ನನ್ನ ದೀರ್ಘ ವಿಶ್ರಾಂತಿಗಾಗಿ ಒಂದು ಸ್ಥಳವನ್ನೂ ತಮ್ಮ ಪವಿತ್ರವಾಣಿಯಿಂದ ಅಪ್ಪಣೆಕೊಡಿಸಬೇಕಾಗಿ ಪ್ರಾರ್ಥನೆ.

**ಪ್ರಭುದೇವರು:**–ಚಿನ್ನಬಸವಣ್ಣನವರೇ, ನಾನಾಗಿ ತಿಳಿಸಬೇಕೆಂದಿದ್ದ ಮಹತ್ವವಾದ ಈ ಎರಡು ವಿಷಯಗಳನ್ನು ತಾವಾಗಿ ಕೇಳಿದಿರಿ ಬಹಳ ಸಂತೋಷವಾಯಿತು.

ಮೊದಲನೆಯದಾಗಿ ಕಲ್ಯಾಣದ ತರುವಾಯ ಜಂಗಮರಿಗೆ, ಶರಣರಿಗೆ ಆಶ್ರಯ ಸ್ಥಾನವೆಂದರೆ:—ನನಗೆ ತಿಳಿದ ಹಾಗೆ ಬನವಾಸಿಯಿಂದ ಸೊನ್ನಲಿಗೆಯ ಮಾರ್ಗದಲ್ಲಿ 'ಪೂಬಳ್ಳಿ' ಎಂಬ ಗ್ರಾಮವಿದೆ. ಆ ಪೂಬಳ್ಳಿಗೆ ಎರಡು ಮೈಲು ದೂರದಲ್ಲಿ ಒಂದು ತಿಳಿ ನೀರಿನ ಹೊಂಡವಿದೆ. ಆ ಹೊಂಡದ ಹತ್ತಿರವೇ ಒಂದು ಬಿಲ್ವಪತ್ರೆಯ ಬನವಿದೆ. ಒಂದು ಸುಂದರವಾದ ಹೂದೋಟವೂ ಇದೆ, ಅದರ ಸಮೀಪದಲ್ಲೇ ಒಂದು ಗಿಡಗಂಟಿಯ ಪ್ರದೇಶವಿದೆ, ಆ ಗಿಡಗಳ ಮಧ್ಯದಲ್ಲಿ ಒಂದು ಗವಿ ಇದೆ. ಆ ಗವಿಯಲ್ಲಿ ಓರ್ವ ಮಹಾಶಿವಯೋಗೀಶ್ವರರು ಅನುಷ್ಠಾನ ನಿರತರಾಗಿದ್ದಾರೆ, ಗುರುಸಿದ್ಧೇಶ್ವರರೆಂದು ಅವರ ಹೆಸರು; ಆದರೆ ಅಲ್ಲಿಯ ಜನರು ಅವರನ್ನು ಹುಚ್ಚುಸ್ವಾಮಿ ಎಂದೇ ಕರೆಯುತ್ತಾರೆ. ಮುಂದೆ ಯಾವುದೋ ಮಹತ್ಕಾರ್ಯಕ್ಕಾಗಿ ಆ ಮಹಾತ್ಮರು ಆಗಿನಿಂದಲೇ ತನ್ನ ತಪಃಪ್ರಭಾವವನ್ನು ಮುಂದುವರಿಸುತ್ತಿದ್ದ. ಆ ಶಿವಯೋಗಿಗಳು ಇನ್ನೂ ಅದೇ ಸ್ಥಳದಲ್ಲಿಯೇ ತಮ್ಮ ಅನುಷ್ಠಾನವನ್ನು ಮುಂದುವರೆಸಿದ್ದಾರೆ. ಅವರು ಮಹಾ ಸಾಮರ್ಥ್ಯಶಾಲಿಗಳು. ಮುಂದೆ ಕಲ್ಯಾಣದ ಕ್ರಾಂತಿಯಾಗುವುದೆಂಬುದನ್ನೂ, ಆ ಕ್ರಾಂತಿಯಿಂದ ಚದುರಿಹೋದ ಶರಣ ಜಂಗಮರಿಗೆ ಬೇರೆ

ಲ್ಲಿಯೂ ಸರಿಯಾದ ಆಶ್ರಯ ಅಷ್ಟು ಬೇಗ ದೊರೆಯಲಾರದೆಂಬ ಭವಿಷ್ಯ ವನ್ನು ತಿಳಿದ ಮಹಾತ್ಮರವರು. ಕಲ್ಯಾಣದ ಶರಣ ಜಂಗಮರ ಬರವನ್ನೇ ಕಾಯುತ್ತಾ ಕುಳಿತಿದ್ದಾರೆ. ಆದ್ದರಿಂದ ನಾನು ಮೊದಲು ಈಗ ಮೂರು ಸಾವಿರ ವಿರಕ್ತರ ಒಂದು ತಂಡವನ್ನು ನನ್ನ ಸಂಗಡ ಕರೆದುಕೊಂಡು ಹೋಗುತ್ತೇನೆ. ಕೆಲವು ದಿವಸಗಳ ನಂತರ, ನೀವು ಆ ಭಾಗಕ್ಕೆ ಬರುವ ಸಮಯಕ್ಕೆ ಸರಿಯಾಗಿ ನಾನು ಮೂರುಸಾವಿರ ವಿರಕ್ತರನ್ನು ಅಲ್ಲಿಗೆ ಕಳಿಸಿ ಕೊಡುತ್ತೇನೆ. ನೀವೂ ಸಹ ಆ ಭಾಗಕ್ಕೆ ಬಂದರೆ, ಪೂಬಳ್ಳಿಯನ್ನೇ ಶರಣ ಧರ್ಮದ ಕೇಂದ್ರವನ್ನಾಗಿ ಮಾಡಿಕೊಂಡು. ಶರಣ ಧರ್ಮದ ಪ್ರಸಾರವನ್ನು ಮುಂದುವರೆಸಬಹುದು. ಮೂರುಸಾವಿರ ವಿರಕ್ತರು ನಿಮ್ಮನ್ನು ಕೂಡಿಕೊಂಡ ನಂತರ, ಪೂಬಳ್ಳಿಯಲ್ಲಿ ಅವರೆಲ್ಲರಿಗೆ ಆಶ್ರಯ ದೊರಕಿಸಿಕೊಟ್ಟು, ಮುಂದೆ ತಾವು ಅಲ್ಲಿಂದ ಸಹ್ಯಾದ್ರಿಪರ್ವತಗಳ ದಂಡೆಯಲ್ಲಿರುವ ಘೋರಾರಣ್ಯವನ್ನು ಪ್ರವೇಶ ಮಾಡಿದರೆ, ಅಲ್ಲಿ ಒಂದು ಬೃಹದಾಕಾರವಾದ ಗವಿಯಿದೆ; ಅದೇ ಪವಿತ್ರ ಸ್ಥಳದಲ್ಲಿ ತಾವು ಅನುಷ್ಠಾನಗೈದು ಅಲ್ಲಿಯೇ ಶಾಶ್ವತವಾಗಿ ಉಳಿಯಿರಿ. ತಾವು ಉಳಿದ ಆ ಪವಿತ್ರ ಸ್ಥಾನಕ್ಕೆ "ಉಳವಿ ಎಂದು ಉಳವಿ ಕ್ಷೇತ್ರ" ವೆಂದೂ ಲೋಕಪ್ರಸಿದ್ಧಿಯಾಗಲಿ ಎಂದು ಪ್ರಭುದೇವರು ಹರಸಿ ಆಶೀರ್ವದಿಸಿದರು.

ನಂತರ ಮಾಚಿದೇವರನ್ನು ಕರೆದು :

ಮಾಚಿದೇವರೇ! ಚೆನ್ನಬಸವಣ್ಣನವರಿಗೆ ಇನ್ನು ಕೆಲವೇ ದಿವಸಗಳಲ್ಲಿ ಮಹಾಸಂಕಟಸಮಯವಾಗಿ ಪರಿಣಮಿಸುತ್ತದೆ. ಮುಂದೆ ಬಿಜ್ಜಳನ ಸೈನ್ಯವು ಸದಾ ಅವರ ಮೇಲೆ ಕಣ್ಣಿರಿಸಿರುತ್ತದೆ; ಶರಣರ ನಾಯಕನಾದ ಚೆನ್ನಬಸವಣ್ಣನವರನ್ನು ಮೊದಲು ಮುಗಿಸಬೇಕೆಂಬ ಸಂಕಲ್ಪ ತೊಟ್ಟರೂ ತೊಡಬಹುದು. ಆದರೆ, ಚಿಕ್ಕದಣ್ಣಾಯಕರನ್ನು ಯಾವ ಶಕ್ತಿಯೂ ಏನೂ ಮಾಡಲಾರದು; ಆದರೂ ನಾವು ಜಾಗೃತರಾಗಿರಬೇಕು. ನಮ್ಮ ಶರಣ ಧರ್ಮದ ಮುಂದಿನ ಭವಿಷ್ಯ ಚೆನ್ನಬಸವಣ್ಣನವರ ಅಸ್ತಿತ್ವದಲ್ಲಿದೆ (ಅಡಗಿದೆ). ಇಡೀ ಶರಣ ಕೋಟಿಯ ಅಳಿವು-ಉಳಿವು ಚೆನ್ನಬಸವಣ್ಣನವರನ್ನು ಕೂಡಿದೆ. ಅದ್ದರಿಂದ, ತಾವು ಅವರ ಅಂಗರಕ್ಷಕರಾಗಿದ್ದು. ಅವರು "ಉಳವಿಯ ಮಹಾ

ಮನೆ" ಯನ್ನು ತಲುಪುವವರೆಗೆ ಅವರಿಗೆ ಯಾವ ತರದ ಅಪಾಯವೂ ಬಾರದಂತೆ ಅವರನ್ನು ರಕ್ಷಣೆ ಮಾಡುವ ಭಾರ ನಿಮ್ಮದಾಗಿದೆ. ವಯೋವೃದ್ಧರೂ, ಜ್ಞಾನವೃದ್ಧರೂ, ಗಣಾಚಾರ ಪ್ರಮುಖರೂ, ವೀರತ್ವಕ್ಕೆ ಹೆಸರಾದವರೂ ಆದ ತಮಗೆ ನಾನು ಇದಕ್ಕಿಂತ ಹೆಚ್ಚಿಗೆ ಹೇಳುವ ಅವಶ್ಯವಿಲ್ಲ. ಆದುದರಿಂದ, ಚನ್ನಬಸವಣ್ಣನವರ ರಕ್ಷಣೆಯಲ್ಲಿ ತಾವು ತಪ್ಪದೇ ಪ್ರತಿಜ್ಞೆ ಕೈಕೊಳ್ಳಬೇಕು.

ಮಡಿವಾಳ ಮಾಚಿದೇವರಿಗೆ ಪ್ರಭುದೇವರ ಮಾತುಗಳನ್ನು ಕೇಳುತ್ತಲೇ ರೋಮಾಂಚನವಾಯಿತು. ಎಲ್ಲಿಂದಲೋ ಒಂದು ದಿವ್ಯಶಕ್ತಿಯು, ವಿದ್ಯುತ್ ಪ್ರವಾಹದಂತೆ ಅವರ ದೇಹದಲ್ಲಿ ಪ್ರವೇಶಿಸಿದಂತಾಗಿ ಕೂಡಲೇ ಪ್ರತಿಜ್ಞೆ ಮಾಡಿದ್ದಾರೆ.

## ಮಡಿವಾಳ ಮಾಚಿದೇವರ ಪ್ರತಿಜ್ಞೆ :

ನಮ್ಮ ಪ್ರಮಥಗಣಂಗಳು ಉಳಿವೆಯ ಮಹಾಮನೆಗೆ
ಹೋಗಿಹ ಪರ್ಯಂತ ಒಬ್ಬರನು ಬಿಟ್ಟೆನಾದೊಡೆ
ನನ್ನ ಕೈಯ್ಯಲ್ಲಿರ್ದ ವೀರಭದ್ರರಣವಿಜಯವೆಂಬ ಖಡ್ಗ
ಉರಿದೇಳುತ್ತ ಸಿಡಿದು ಹೋಗದೆ ?
ನನ್ನ ಕೈಯ್ಯಲ್ಲಿಪ್ಪ ಕಾಲಾಗ್ನಿರುದ್ರವೆಂಬ ಮುರಿಗೆಯು
ಅಳವಾಡಿ ನಗದೆ ?
ಕಾಲಕರ್ಮಂಗಳೆಂಬ ಸುರಿಗೆಯು ಎನ್ನೆದೆಯ ಹಾಯ್ದು
ಬೆನ್ನಲ್ಲಿ ಒಡಮೂಡಿದೆ ?
ಪರವಾದಿಗಳ ಗಂಡನೆಂಬ ಪದದ ಬಾವುಲಿಯ ಬೊಂಬೆಯು
ತೊಡರು ಭಂಗಿಸುತ್ತ ಹೋಗದೆ ?
ಎನ್ನ ಕರ್ಣದಲ್ಲಿದ್ದ ಲಿಂಗಾಂಗವೆಂಬ ಘಂಟೆ
ಬಿದ್ದು ಹೋಗದೆ ಅಯ್ಯಾ ?
ಕಲಿದೇವರ ಸಾಕ್ಷಿಯಾಗಿ ಚೆನ್ನಬಸವಣ್ಣಾ !

ಎಂಬುದಾಗಿ ಪ್ರತಿಜ್ಞೆ ಮಾಡಿದ್ದಾರೆ.

ಈ ಮೇಲಿನ ಇಬ್ಬರ ಪ್ರತಿಜ್ಞೆಯನ್ನು ಸ್ವೀಕರಿಸಿದ ಪ್ರಭುದೇವರು-ಎಲ್ಲ ಶರಣರಿಗೆ ತಮ್ಮ ದೀರ್ಘವಾದ ಆಶೀರ್ವಾದವನ್ನು ಕರುಣಿಸಿ, ಮೂರು ಸಾವಿರ ವಿರಕ್ತರೊಂದಿಗೆ ಕಲ್ಯಾಣದಿಂದ ನಿರ್ಗಮಿಸಿದರು.

## ಶರಣರಿಗೆ ಮರಣವೇ ಮಹಾನವಮಿ :

ಕಲ್ಯಾಣದಲ್ಲಿ ಬಸವಣ್ಣನವರು ಅಲ್ಲಮಪ್ರಭುದೇವರನ್ನು ಬೀಳ್ಕೊಟ್ಟ ನಂತರ, ಕೆಲವೇ ದಿವಸಗಳಲ್ಲಿ ವರ್ಣಸಂಕರದ ತಪ್ಪಿಗಾಗಿ ಹರಳಯ್ಯ-ಮಧುವಯ್ಯರನ್ನು ತ ಪ್ಪಿ ತ ಸ್ಥ ರೆಂ ದು ನ್ಯಾಯಾಲಯಕ್ಕೆ ಗುರಿಮಾಡಿದರು. ಬಸವಣ್ಣನವರು ಮಂತ್ರಿಪದವಿಯನ್ನು ತ್ಯಜಿಸಿ ಕಪ್ಪಡಿ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದರು. ಇದಾದ ಕೆಲವೇ ದಿವಸಗಳಲ್ಲಿ, ವೀರಶೈವರಾದ ಹರಳಯ್ಯ-ಮಧುವಯ್ಯರ ನ್ಯಾಯವಿಚಾರಣೆಯು ಬಿಜ್ಜಳನ ನೇತೃತ್ವದಲ್ಲಿ ನಡೆದು, ಉಭಯತರೂ ತಪ್ಪಿತಸ್ಥರೆಂದು ತೀರ್ಮಾನವಾಗಿ, ಉಭಯರಿಗೂ ಎಳೆ ಹೂಟೆಯ ಶಿಕ್ಷೆಯನ್ನು ವಿಧಿಸಲಾಯಿತು. ನ್ಯಾಯನಿರ್ಣಯವಾದ ಮೂರು-ನಾಲ್ಕುದಿವಸಗಳಲ್ಲಿ ಅಂದರೆ: ೧೧೬೭ನೇ ಇಸ್ವಿಮಾಘ ಪೌರ್ಣಮಿಯ ದಿವಸ ಹರಳಯ್ಯ-ಮಧುವಯ್ಯರು ಎಳೆಹೂಟಿಗೆ ಒಳಗಾಗಿ ಲಿಂಗದಲ್ಲಿ ಬೆರೆದರು.

ಹರಳಯ್ಯ-ಮಧುವಯ್ಯರ ಎಳೆಹೂಟೆಯ ನಂತರ, ಕಲ್ಯಾಣದಲ್ಲಿ ಎಲ್ಲ ಶರಣರೂ ಮಹಾದುಃಖಸಾಗರದಲ್ಲಿ ಮುಳುಗಿದರು; ಬಸವಣ್ಣನವರೂ, ಪ್ರಭುದೇವರೂ ಕಲ್ಯಾಣದಿಂದ ನಿರ್ಗಮಿಸಿದ್ದಕ್ಕೆ ಮೊದಲೇ ದುಃಖದಲ್ಲಿದ್ದ ಶರಣರಿಗೆ ಈಗಂತೂ ದುಃಖವನ್ನು ಸಹಿಸಲಾರದಂತಾಯಿತು; ಮುಂದೇನು ಮಾಡಬೇಕೆಂಬುದೇ ತೋಚದಂತಾಯಿತು. ಮಾಚಿದೇವರ ನೇತೃತ್ವದಲ್ಲಿ ಎಲ್ಲ ಶರಣರೂ ಚೆನ್ನಬಸವಣ್ಣನವರನ್ನು ಕಂಡು ತಮ್ಮ ಶೋಕವನ್ನು, ದುಃಖವನ್ನು ತೋಡಿಕೊಂಡರು. ತಂದೆ-ತಾಯಿಗಳನ್ನು ಕಳೆದುಕೊಂಡ ತಬ್ಬಲಿಗಳಂತಾಗಿರುವೆವು; ನಮಗೆ ಮುಂದಿನ ದಾರಿ ತೋರುವವರು ನಮ್ಮ ಪಾಲಿಗೆ ಉಳಿದಿರುವವರು ತಾವೊಬ್ಬರೇ ಎಂದು ಎಲ್ಲರೂ ರೋಧಿಸತೊಡಗಿದರು. ಅಂತೂ ಕಲ್ಯಾಣ ಶೋಕಸಾಗರದಲ್ಲಿ ಮುಳುಗಿತು. ಇಡೀ ಒಂದು ರಾತ್ರಿ

ಅನುಭವಮಂಟಪದಲ್ಲಿ ಅದೇ ವಿಚಾರ ನಡೆಯಿತು. ಮುಂದೇನು ಮಾಡ ಬೇಕೆಂಬುದೇ ಮುಖ್ಯ ವಿಷಯ—

ಇಷ್ಟರಲ್ಲಿ ಕೆಲವು ಶರಣ ವಿರೋಧಿಗಳು, ಸಮಯ ಸಾಧಿಸಿ ಬಿಜ್ಜಳ ಭೂಪಾಲನಲ್ಲಿಗೆ ಹೋಗಿ: "ಪ್ರಭುಗಳೇ ! ತಮ್ಮ ಕೊಲೆ ಸಂಚು ನಡೆದಿದೆ; ಇನ್ನು ನಿಮಗೂ, ಶರಣರಲ್ಲದ ಇತರ ಮತೀಯರಿಗೂ ಇನ್ನು ಕಲ್ಯಾಣದಲ್ಲಿ ಉಳಿಗಾಲವಿಲ್ಲ. ನಿನ್ನೆ ಇಡೀ ರಾತ್ರಿ ಶರಣರು ಸಭೆ ಸೇರಿ ತೀರ್ಮಾನಕ್ಕೆ ಬಂದಿದ್ದಾರೆ. ಆದಷ್ಟು ಬೇಗ ಬಿಜ್ಜಳನನ್ನು ಕೊಲೆ ಮಾಡಬೇಕೆಂದು ಪಣ ತೊಟ್ಟಿದ್ದಾರೆ. ಆದ್ದರಿಂದ, ಪ್ರಭುಗಳು ಬಹಳ ಎಚ್ಚರದಿಂದಿರಬೇಕು ಎಂದು ಸುಳ್ಳು ವದಂತಿಯನ್ನು ಹರಡಿದರು. ಹರಳಯ್ಯ-ಮಧುವಯ್ಯರ ಎಳೆಹೂಟೆಯ ನಂತರ, ಶರಣರ ಮೇಲೆ ಮೊದಲೇ ಸಂಶಯಗೊಂಡಿದ್ದ ಬಿಜ್ಜಳನು ಈ ವದಂತಿಯನ್ನು ಸತ್ಯವೆಂದೇ ಭಾವಿಸಿ, ದುಡುಕಿ ವಿಚಾರಿಸದೆ, ಹಿಂದು-ಮುಂದು ನೋಡದೆ ಶರಣರ ಬಗ್ಗೆ ಬಹಳ ಜಾಗ್ರತೆಯಿಂದಿರಲು ಪ್ರಸಂಗ ಬಂದರೆ ಅವರನ್ನು ನಿಗ್ರಹಿಸಲೂ ಸೈನ್ಯಕ್ಕೆ ಆಜ್ಞೆಯಿತ್ತನು. ಇದಕ್ಕಾಗಿ ಒಬ್ಬ ತನ್ನ ವಿಶ್ವಾಸಕ್ಕೆ ಪಾತ್ರನಾದ ಸೈನ್ಯಾಧಿಪತಿಯನ್ನು ನೇಮಿಸಿದನು. ಮೊದಲೇ ಶರಣರ ವಿರೋಧಿಯಾಗಿದ್ದ ಆ ಹೊಸ ಸೈನ್ಯಾಧಿಪತಿಯು, ತನ್ನ ಹಗೆ ತೀರಿಸಿಕೊಳ್ಳಲು ಇದೇ ಸಮಯವೆಂದು ತತ್‌ಕ್ಷಣವೇ ಸುಗ್ರೀವಾಜ್ಞೆಯೊಂದನ್ನು ಜಾರಿಗೆ ತಂದನು. ಇನ್ನೆರಡು ದಿವಸಗಳಲ್ಲಿ ಕಲ್ಯಾಣದಲ್ಲಿರುವ ಎಲ್ಲ ವೀರಶೈವ ಮಠಗಳನ್ನೂ ನೆಲಸಮ ಮಾಡಲು ಆಜ್ಞೆ ಮಾಡಿದ. ವಯೋಮಿತಿಯನ್ನು ನೋಡದೆ, ಹೆಣ್ಣು ಗಂಡೆಂಬ ದಾಕ್ಷಿಣ್ಯವಿಲ್ಲದೆ ಕಲ್ಯಾಣದಲ್ಲಿರುವ ಎಲ್ಲ ಶರಣರನ್ನೂ ಕೊಲೆ ಮಾಡಿ, ರಕ್ತದ ಕಾಲುವೆ ಹರಿಸಿ, ಶರಣರ ವಂಶ ನಿರ್ವಂಶ ಮಾಡಲು ಆಜ್ಞೆಮಾಡಿದ. ಮುಂದಿನ ಎರಡು ದಿವಸಗಳಲ್ಲಿ ಜರಗುವ ಈ ಸಾಮೂಹಿಕ ಕೊಲೆಗೆ ಇಂದಿನಿಂದಲೇ ಸಿದ್ಧತೆಗಳನ್ನು ಮಾಡಿಕೊಳ್ಳಲು ಸೈನ್ಯಕ್ಕೆ ಅಪ್ಪಣೆ ಮಾಡಿದ. ಈ ಎರಡು ದಿವಸ-ಗಳೊಳಗೆ ಯಾವ ಒಬ್ಬ ಶರಣನೂ ಕಲ್ಯಾಣದ ಕೋಟೆಯೊಳಗಿಂದ ಪಾರಾಗದಂತೆ ಕಟ್ಟುನಿಟ್ಟಾದ ಕಾವಲನ್ನಿರಿಸಿದ. ಅದಕ್ಕೆ ತಕ್ಕ ಸಾಮರ್ಥ್ಯವುಳ್ಳ ವೀರಾಗ್ರೇಸರನಾದ ಒಬ್ಬನನ್ನು ಕೋಟೆಯ ಕಾವಲಿನ ದಳದವರ ನಾಯಕನನ್ನಾಗಿ ನೇಮಿಸಿದ.

ಸಂಶಯ ಭೂತವನ್ನು ಬೆನ್ನು ಹತ್ತಿಸಿಕೊಂಡವರಿಗೆ ಒಳ್ಳೇದು ಯಾವದು, ಕೆಟ್ಟದ್ದು ಯಾವದು ಎಂಬುದು ಅರ್ಥವಾಗುವದು ಕಠಿಣವಾಗುತ್ತದೆ.

ಅಂತೆಯೇ— "ಸಂಶಯಾತ್ಮಾ ವಿನಶ್ಯತಿ" ಎಂಬ ವಾಕ್ಯವಿದೆ.

ಈ ಅನಿಷ್ಟಕಾರಕ ವಾರ್ತೆಯನ್ನು ಅರಮನೆಯ ಊಳಿಗದವರಾದ ಗುಪ್ತ ಶರಣರು ತಿಳಿದು ಚೆನ್ನಬಸವಣ್ಣನವರಿಗೆ ಗುಪ್ತವಾಗಿ ತಿಳಿಸಿದರು. ಗಂಡಾಂತರದ ಸುದ್ದಿ ತಿಳಿದ ಕೂಡಲೇ, ಚೆನ್ನಬಸವಣ್ಣನವರು ಸ್ವಲ್ಪಸಮಯದಲ್ಲೇ ಕಲ್ಯಾಣದ ಎಲ್ಲ ಶರಣರನ್ನೂ ಕರೆಸಿ, ಮಡಿವಾಳ ಮಾಚಯ್ಯ-ನವರ ನೇತೃತ್ವದಲ್ಲಿ ಒಂದು ಗುಪ್ತ ಸಭೆಯನ್ನು ಏರ್ಪಡಿಸಿ, ಸಮಾಲೋಚನೆ ನಡೆಸಿ, ಮುಂದೇನು ಮಾಡಬೇಕೆಂಬುದನ್ನು ವಿಚಾರವಿನಿಮಯ ಮಾಡಿದರು.

**ಚೆನ್ನಬಸವಣ್ಣನವರು:—** ಹಿರಿಯರೂ, ಪರಮ ಹಿತಚಿಂತಕರೂ, ಅನುಭಾವಿಗಳೂ ಆದ ಮಾಚಯ್ಯನವರೇ, ಹಾಗೂ ಕಲ್ಯಾಣದ ಸಮಸ್ತ ಶರಣ-ಶರಣೆಯರೇ– ಈಗ ನಮ್ಮ ಮುಂದಿರುವುದು ಎರಡೇ ಎರಡು ಮಾರ್ಗಗಳು. ಮೊದಲನೆಯದಾಗಿ ಪ್ರಾಣ ರಕ್ಷಣೆಗೆ ಖಡ್ಗ ಹಿಡಿದು ಎದೆಗೊಟ್ಟು ಹೋರಾಡುವದು, ಇಲ್ಲವೇ ಎರಡನೆಯದಾಗಿ ಪ್ರಾಣ ಉಳಿಸಿಕೊಳ್ಳಲು ಬೆನ್ನು ತೋರಿಸಿ ಓಡಿ ಹೋಗುವುದು.

ಈ ಎರಡು ಮಾರ್ಗಗಳಲ್ಲಿ ಈಗ ನಾವು ಯಾವುದನ್ನು ಆರಿಸಿಕೊಳ್ಳ-ಬೇಕೆಂಬುದನ್ನು ಶರಣರ ಬಹುಮತದಿಂದ ನಿರ್ಣಯಿಸಬೇಕಾಗಿದೆ. ಆದುದ-ರಿಂದ ಎಲ್ಲ ಶರಣರೂ ದೀರ್ಘವಾಗಿ ಆಲೋಚನೆ ಮಾಡಿ, ತಮ್ಮ-ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಬೇಕೆಂದು, ಶರಣರ ಸಭೆಯ ಮುಂದೆ ತಮ್ಮ ಹೇಳಿಕೆಯನ್ನು, ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಎದೆಗೊಟ್ಟು ಹೋರಾಡುವುದೇ ಶ್ರೇಷ್ಠವೆಂದು ಶರಣರ ಬಹುಮತ-ವಾಯಿತು. ಆದರೆ, ಚೆನ್ನಬಸವಣ್ಣನವರು ಅಂತ ಸಂದಿಗ್ಧಸಮಯದಲ್ಲೂ ಪ್ರಸನ್ನವದನರಾಗಿ ಎಲ್ಲ ಶರಣರಿಗೆ ಉಪದೇಶ ಮಾಡಿದರು.

## ಚಿಕ್ಕದಣ್ಣಾಯಕರ ಉಪದೇಶ :

ಶರಣರೇ! ಹಿಂಸೆಯಿಂದ ನಮ್ಮ ಶರಣ ಧರ್ಮವನ್ನು ಉಳಿಸಿಕೊಳ್ಳುವ ಇಚ್ಛೆ ನಮಗಿಲ್ಲ. ಹಾಗಿದ್ದಿದ್ದರೆ ಬಸವಣ್ಣನವರು ಕಲ್ಯಾಣ ಬಿಟ್ಟು ಹೋಗ ಬೇಕಾಗಿದ್ದಿಲ್ಲ; ಹರಳಯ್ಯ-ಮಧುವಯ್ಯರು ಮರಣದಂಡನೆಗೆ ಒಳಪಡಬೇಕಾ ಗಿದ್ದಿಲ್ಲ. “ ದಯವೇ ಧರ್ಮದ ಮೂಲವಯ್ಯಾ” ಎಂದು ಸಾರಿದ ಬಸವಣ್ಣ-ನವರ ಮಹಾಮಂತ್ರವನ್ನೂ, “ತನಗೆ ಮುನಿದವರಿಗೆ ತಾ ಮುನಿಯ-ಲೇಕಯ್ಯ” ಎಂಬ ಅವರ ವಚನವನ್ನೂ ನಾವು ಆಚರಣೆಗೆ ತಂದು ತೋರಿಸಿ, ನಿಜವಾದ ಶರಣ ಧರ್ಮವನ್ನು ಜಗತ್ತಿಗೆ ತೋರಿಸಿಕೊಡಬೇಕಾಗಿದೆ. ಮೇಲಾಗಿ ನಾವು ಖಡ್ಗವನ್ನು ಹಿಡಿದು ಹೋರಾಡಲು ಸಿದ್ಧರಾದರೆ, ನಮ್ಮ ಅನೇಕ ಶಿವ ಶರಣಿಯರ ಮಾನ-ಪ್ರಾಣಗಳ ಹಾನಿಯಾಗುವುದು. ಎಲ್ಲಕ್ಕೂ ಮಿಗಿಲಾಗಿ, ನಾವು ಬಹಳ ಪ್ರಯಾಸದಿಂದ ಸಂಗ್ರಹಿಸಿಟ್ಟಿರುವ ಅಮೂಲ್ಯವಾದ ವಚನ ಸಾಹಿತ್ಯ ಸರಸ್ವತೀ ಭಾಂಡಾರವನ್ನು ಭವಿಗಳು ನಾಶಮಾಡಿಬಿಡುವರು. ಆದು ದರಿಂದ ನಾವು ಏನಾದರೂ ಪ್ರಯತ್ನಮಾಡಿ, ಶರಣರ ಕೊಲೆಯಾಗುವುದಕ್ಕೆ ಮುಂಚಿತವಾಗಿಯೇ ನಮ್ಮ ಅಮೂಲ್ಯವಾದ ವಚನ ಸಾಹಿತ್ಯ ಸಂಗ್ರಹ-ಗಳೊಂದಿಗೆ ಬಿಜ್ಜಳನಿಗೆ ತಿಳಿಯದಂತೆ ಕಲ್ಯಾಣದಿಂದ ಪಾರಾಗಬೇಕಾಗಿದೆ. ದಯವಿಟ್ಟು ನೀವೆಲ್ಲರೂ ನನ್ನ ಮಾತನ್ನು ಮೀರದೆ, ನನ್ನ ಹಾಗೂ ಮಾಚಿ ದೇವರ ನೇತೃತ್ವದಲ್ಲಿ ಇಂದೇ ರಾತ್ರಿ ಹೊರಟುಬಿಡಬೇಕೆಂದು ಆಜ್ಞಾಪಿಸಿ ದರು. ಇವರ ಈ ತೀರ್ಮಾನವನ್ನು ಮಡಿವಾಳ ಮಾಚಿದೇವರು ಅನುಮೋ ದಿಸಿದರು. ಅಂತೂ ಇಂದು ಮಧ್ಯರಾತ್ರಿಯಲ್ಲಿ ಕಲ್ಯಾಣದ ಕೋಟೆಯಿಂದ ಪಾರಾಗಲು ಎಲ್ಲ ಶರಣರು ಸಿದ್ಧತೆಗಳನ್ನು ನಡೆಸಿದರು. ಮಡಿವಾಳ ಮಾಚಿ ದೇವರ ಪ್ರಯತ್ನದಿಂದ ಎಲ್ಲ ಶರಣರೂ ಮಧ್ಯರಾತ್ರಿ ಸಮಯದಲ್ಲಿ ಕೋಟೆ ಯಿಂದ ಪಾರಾದರು; ಕೋಟೆಯ ಕಾವಲಿನ ದಳದವರ ನಾಯಕನು ಗುಪ್ತ ಶರಣರಾಗಿದ್ದುದರಿಂದಲೂ, ಮಾಚಿದೇವರಿಗೆ ಅವನ ಸಹಕಾರ ದೊರೆತದ್ದ ರಿಂದಲೂ ಶರಣರಿಗೆ ಪಾರಾಗಲು ಅನುಕೂಲವಾಯಿತು. ಕೆಲವು ಶರಣರು ಹಾಗೂ ಹೀಗೂ ಕಲ್ಯಾಣದಲ್ಲೇ ಉಳಿದುಕೊಂಡರು.

ತಮ್ಮ ಅಮೂಲ್ಯ ವಚನ ಸಾಹಿತ್ಯ ಭಾಂಡಾರದೊಂದಿಗೆ, ಶರಣರು ಕಲ್ಯಾಣದ ಸೀಮೆಯನ್ನು ದಾಟಿದರು. ಬೆಳಗಾಯಿತು. ಸೂರ್ಯೋದಯ ಸಮಯಕ್ಕೆ ಶರಣರು, ಚೆನ್ನಬಸವಣ್ಣನವರ ನೇತೃತ್ವದಲ್ಲಿ ಲಿಂಗಾರ್ಚನಾ ನಿರತರಾಗಿದ್ದ ಸಮಯದಲ್ಲಿ, ಕಲ್ಯಾಣದಲ್ಲಿ ಬಿಜ್ಜಳನ ಕೊಲೆಯಾದ ಸುದ್ದಿ ಬಂದಿತು. ಆದರೆ ಕೊಲೆಯು ಯಾರಿಂದ ನಡೆಯಿತು ಎಂಬುದು ಮಾತ್ರ ಯಾರಿಗೂ ತಿಳಿಯಲಿಲ್ಲ. ಮುಂದೆ, ಚೆನ್ನಬಸವಣ್ಣನವರು ಶರಣರೊಡನೆ ಕೃಷ್ಣಾನದಿಯನ್ನು ದಾಟಿ, ಬಿಜಾಪೂರ ಜಿಲ್ಲೆಯ ಸೀಮೆದಾಟಿ ಈಗಿನ ಬೆಳಗಾಂವಿ ಜಿಲ್ಲೆಯ ಸೀಮೆಗೆ ಬಂದರು. ಬಿಜ್ಜಳನ ಅಪ್ಪಣೆಯಂತೆ ಶರಣರನ್ನು ಬೆನ್ನಟ್ಟಿ ನಾಶಮಾಡಲು ಸೈನ್ಯವು ಬೆನ್ನು ಹತ್ತಿತು. ಶರಣರು ನಿರ್ವಾಹವಿಲ್ಲದೆ ಖಡ್ಗ ಹಿಡಿದುಹೋರಾಡಬೇಕಾದ ಪ್ರಸಂಗ ಬಂದಿತು. ಇದೇ ಸಮಯಕ್ಕೆ ಕಪ್ಪಡಿ ಕ್ಷೇತ್ರದಿಂದ ಬಸವಣ್ಣನವರು ಲಿಂಗೈಕ್ಯರಾದ ಸುದ್ದಿಯೂ ಬಂದುತಲುಪಿತು.

ಕಲ್ಯಾಣ ಕ್ರಾಂತಿಗಿಂತಲೂ ಮೊದಲೇ, ಅಲ್ಲಮಪ್ರಭುದೇವರ ಅಪ್ಪಣೆಯಂತೆ ಹೊರಟ ಮೂರುಸಾವಿರ ವಿರಕ್ತರ ತಂಡವು ತಮಿಳುನಾಡಿನಲ್ಲಿ ಕೆಲವು ದಿವಸ ಸಂಚರಿಸಿ, ಶರಣ ಧರ್ಮ ಪ್ರಚಾರಮಾಡಿ, ಕರ್ನಾಟಕ ಸೀಮೆಗೆ ಬಂದ ಕೂಡಲೇ ಅವರಿಗೂ ಬಸವಣ್ಣನವರು ಲಿಂಗೈಕ್ಯರಾದ ಸುದ್ದಿ ತಿಳಿಯಿತು. ಸುದ್ದಿ ತಿಳಿದ ಕೂಡಲೇ ಕೋಟಿ ಸಿಡಿಲು ಬಡಿದಂತಾಯಿತು. ಮುಂದೆ ಚೆನ್ನಬಸವಣ್ಣನವರನ್ನು ಕೂಡಿಕೊಳ್ಳಲು, ಮೂರುಸಾವಿರ ವಿರಕ್ತರು ಶರವೇಗದಿಂದ ಪ್ರಯಾಣ ಬೆಳೆಸಿದರು, ಅಷ್ಟರಲ್ಲಿ ಚೆನ್ನಬಸವಣ್ಣನವರು ಬೆಳಗಾಂವಿ ಜಿಲ್ಲೆಯ ಈಗಿನ ಕಾದರವಳ್ಳಿಯ ಹತ್ತಿರ ಬಂದಿದ್ದರು. ಆ ಭಾಗದಲ್ಲಿ ಶರಣರಿಗೂ, ಬಿಜ್ಜಳನ ಸೈನ್ಯಕ್ಕೂ ದೊಡ್ಡ ಕಾಳಗವಾಯಿತು. ಕಾಳಗದ ಸ್ಮರಣಾರ್ಥವಾಗಿ ಆ ಊರಿಗೆ ಕಾದಿದವರ ಹಳ್ಳಿ ಎಂದು ಹೆಸರಾಯಿತು. ಬರ-ಬರುತ್ತಾ ಜನರ ಬಾಯಲ್ಲಿ ಕಾದರವಳ್ಳಿ ಎಂದಾಯಿತು. ಮುಂದೆ ನಂದೇಶ್ವರದ (ಈಗಿನ) ಗ್ರಾಮದ ಶರಣರು ಚೆನ್ನಬಸವಣ್ಣನವರನ್ನೂ, ಎಲ್ಲ ಶರಣರನ್ನೂ ಪ್ರಸಾದಕ್ಕೆ ಕರೆದರು; ಚೆನ್ನಬಸವಣ್ಣನವರು ಬೇಡವೆಂದರೂ ಆ ಗ್ರಾಮದವರು ಬಲವಂತ ಮಾಡಿದ್ದರಿಂದ ನಿರ್ವಾಹವಿಲ್ಲದೆ ಹೋದರು. ಆದರೆ, ಶಿವಪೂಜೆ ಮುಗಿದು ಇನ್ನೇನು! ಪ್ರಸಾದ ಸ್ವೀಕರಿಸುವ ಸಮಯಕ್ಕೆ ಬಿಜ್ಜಳನ

ಸೈನ್ಯವು ಬಂದು ಮುತ್ತಿತು: ಎಲ್ಲ ಶರಣರೂ ಪ್ರಸಾದವನ್ನು ಬಿಟ್ಟು ಹೊರಟು ಬರಬೇಕಾಯಿತು. ಈಗಲೂ ಆ ಊರಲ್ಲಿ ಯಾವುದೇ ದೊಡ್ಡ ಸಾರ್ವಜನಿಕ ಕಾರ್ಯ ನಡೆದರೂ ಪ್ರಸಾದದ ಕೊರತೆಯಾಗುತ್ತದೆ. ಮುಂದೆ ಧಾರವಾಡ ಜಿಲ್ಲೆಯ ಹದ್ದಿಗೆ ಬರುವಾಗ, ಈಗಿನ ಕಕ್ಕೇರಿಯ ಬಳಿ ದೊಡ್ಡ ಕದನವಾಗಿ ಶರಣ ಕಕ್ಕಯ್ಯನವರು ಪ್ರಾಣಾರ್ಪಣೆ ಮಾಡಿದರು. ಕಕ್ಕಯ್ಯ-ನವರು ಲಿಂಗೈಕ್ಯರಾದ ಆ ಸ್ಥಳದಲ್ಲಿ ಸಮಾಧಿ ಕಾರ್ಯವನ್ನು ಮುಗಿಸಿ, ಶರಣರು ಮುಂದೆ ಸಾಗಿದರು. ಆ ಊರಿಗೆ ಕಕ್ಕಯ್ಯನಕೇರಿ ಎಂದು ಹೆಸರಾಯಿತು; ಈಗ ಕಕ್ಕೇರಿಯೆಂದು ಕರೆಯುತ್ತಾರೆ. ಈಗಲೂ ಅಲ್ಲಿ ಅವರ ಸಮಾಧಿ ಇದೆ. ಅವರ ಒಂದು ಶಿಲಾಮೂರ್ತಿಯೂ ಇದೆ, ಪುರಾತನ ಶಿಲಾಶಾಸನವೂ ಇದೆ. ಈಗ ಆ ಊರು ಬೆಳಗಾಂವಿ ಜಿಲ್ಲೆಯ ಖಾನಾಪುರದ ಕೊನೆಯ ಹಳ್ಳಿಯಾಗಿದೆ. ಮುಂದೆ ಚೆನ್ನಬಸವಣ್ಣನವರು ಮುಗಟಖಾನಹುಬ್ಬಳ್ಳಿಯ ಮಾರ್ಗವಾಗಿ ಧಾರವಾಡಕ್ಕೆ ಬರುತ್ತಿರುವಾಗ, ಮುಗಟಖಾನಹುಬ್ಬಳ್ಳಿಯ ಹತ್ತಿರ ಬಸವಣ್ಣನವರ ಧರ್ಮಪತ್ನಿ ಗಂಗಾಂಬಿಕೆ ಅವರು ಲಿಂಗೈಕ್ಯರಾದರು. ಅದೇ ಸ್ಥಳದಲ್ಲಿ ಶರಣರು ಅವರ ಸಮಾಧಿ ಕಾರ್ಯ ಮುಗಿಸಿ ಮುಂದೆ ಸಾಗಿದರು.

ಚೆನ್ನಬಸವಣ್ಣನವರು ಧಾರವಾಡಕ್ಕೆ ಬರುವ ಮೂರು ದಿವಸಗಳು ಮುಂಚಿತವಾಗಿಯೇ ಮೂರುಸಾವಿರ ವಿರಕ್ತರು ಧಾರವಾಡಕ್ಕೆ ಬಂದು ವಾಸ್ತವ್ಯ ಮಾಡಿದ್ದರು; ಚೆನ್ನಬಸವಣ್ಣನವರು ಧಾರವಾಡಕ್ಕೆ ಬಂದರು. ಮೂರುಸಾವಿರ ವಿರಕ್ತರು ಚೆನ್ನಬಸವಣ್ಣನವರನ್ನು ಸಂಭ್ರಮದಿಂದ ಸ್ವಾಗತಿಸಿದರು; ಬಿಜ್ಜಳನ ಸೈನ್ಯದವರೂ ಮರಳಿ ಕಲ್ಯಾಣದತ್ತ ಹೋದರು.

ಕೆಲವು ದಿನಗಳು ಚೆನ್ನಬಸವಣ್ಣನವರು ಧಾರವಾಡದಲ್ಲಿದ್ದು, ತಮ್ಮ ಸಂಗಡ ಬಂದ ಶರಣರ ಹಾಗೂ ಮೂರುಸಾವಿರ ವಿರಕ್ತರೊಡನೆ ವಾಸ್ತವ್ಯ ಮಾಡಿದ್ದ ಸ್ಥಳವನ್ನು, ಆ ಸ್ಥಳದ ಒಡೆಯನು ಆಶ್ರಮಕ್ಕಾಗಿ ದಾನವಿತ್ತನು. ಅದಕ್ಕೆ ಮೂರುಸಾವಿರ ವಿರಕ್ತರ ಆಶ್ರಮವೆಂದು ಹೆಸರಾಯಿತು. ಅದೇ ಆಶ್ರಮವೇ ಇಂದಿನ ಧಾರವಾಡದಲ್ಲಿರುವ ಶಾಖಾ ಮೂರುಸಾವಿರಮಠ. ಇದಲ್ಲದೆ, ಧಾರವಾಡಕ್ಕೆ ಚೆನ್ನಬಸವಣ್ಣನವರು ಬಿಜಯಂಗೈದ ಸ್ಮರಣಾರ್ಥವಾಗಿ, ಕುರುಹಾಗಿ, ಸಾಕ್ಷಿಯಾಗಿ ಇಂದಿಗೂ ಚೆನ್ನಬಸವಣ್ಣನವರ ಗುಡಿ,

ನಂದೀಕೋಲ ಬಸವಣ್ಣನ ಗುಡಿ ಅಥವಾ ಪವಾಡ ಬಸವಣ್ಣನ ಗುಡಿಗಳು ಇವೆ. ಮುಂದೆ ಅಲ್ಲಮಪ್ರಭುದೇವರ ಅಪ್ಪಣೆಯಂತೆ, ಚೆನ್ನಬಸವಣ್ಣನವರು ಮೂರುಸಾವಿರ ವಿರಕ್ತರನ್ನು ಕೂಡಿಕೊಂಡು ಪೂಬಳ್ಳಿಗೆ ಬಂದರು.

ಹಲವು ಮಾತೇನು, ನೀನೊಲಿದು ಪಾದವನಿಟ್ಟ
ನೆಲವೆ ಸುಕ್ಷೇತ್ರ, ಜಲವೆ ಪಾವನತೀರ್ಥ
ಸುಲಭ ಶ್ರೀಗುರುವೆ ಕೃಪೆಯಾಗು. ॥

## ಪೂಬಳ್ಳಿ ಕ್ಷೇತ್ರ :

ಪೂಬಳ್ಳಿ ಗ್ರಾಮಕ್ಕೆ ಬಂದು, ಗ್ರಾಮದ ಜನರನ್ನು ಕರೆದು—

**ಚೆನ್ನಬಸವಣ್ಣನವರು:**–ಏನ್ರಪ್ಪಾ ಶರಣರೇ ! ಇಲ್ಲಿ ಯಾರಾದರೂ ಗುರುಸಿದ್ಧೇಶ್ವರರೆಂಬ ಹೆಸರಿನ ಶಿವಯೋಗಿಗಳು ಇದ್ದಾರೆಯೇ ? ಎಂದು ಕೇಳಿದರು.

**ಗ್ರಾಮವಾಸಿಗಳು:**— ಇಲ್ರೀ ಬುದ್ಧಿ, ನಮ್ಮೂರಾಗ ಆ ಹೆಸರಿನ ಸ್ವಾಮಿಗಳು ಯಾರೂ ಇಲ್ರಿ.

**ಚೆನ್ನ :**— ಹಾಗಾದರೆ, ಈ ನಿಮ್ಮ ಊರಿನ ಹತ್ತಿರ ಎಲ್ಲಾದರೂ ತಿಳಿನೀರಿನ ಹೊಂಡವಿವೆಯೇ ?

**ಗ್ರಾಮ:**— ಊನ್ರಪಾ, ಐತರೀ; ಅದು ಮಾತ್ರ ಖರೇ.

**ಚೆನ್ನ :**—ಹಾಗಾದರೆ, ಅಲ್ಲಿ ಯಾರಾದರೂ ಶಿವಯೋಗಿಗಳು ವಾಸವಾಗಿದ್ದಾರೇನು?

**ಗ್ರಾಮ:**— ಅಂದ್ಹಂಗ, ಒಬ್ಬ ಹುಚ್ಚುಸ್ವಾಮಿಗಳು ಮಾತ್ರ ಇರತಾರ್ರೆಪಾ.

**ಚೆನ್ನ:**—ಹೂಂ, ಅವರೇ ನಾನು ಕೇಳಿದ ಶಿವಯೋಗೀಶ್ವರರು. ಬೇಗ ಬನ್ನಿರೆಪ್ಪಾ, ಅವರ ಆಶ್ರಮದ ದಾರಿ ತೋರಿಸಿರಿ ಸಹಸ್ರಾರು ವಿರಕ್ತರು ಎಂದರು.

ಅಸಂಖ್ಯಾತ ಶರಣರೊಂದಿಗೆ ಬಿಜಯಂಗೈದ ಚೆನ್ನಬಸವಣ್ಣನವರನ್ನು ನೋಡಿ ಪೂಬಳ್ಳಿಯ ಗ್ರಾಮಸ್ಥರು ಬೆಚ್ಚಿಬೆರಗಾದರು. ಊರಿಗೇ ಊರೇ ಅವರ ಬೆನ್ನು ಹತ್ತಿ ಹೊರಟರು. ದಾರಿತೋರಿಸಲು ಬಂದ ಗ್ರಾಮಸ್ಥರಿಗೆ ದಿಕ್ಕು ತೋಚದಂತಾಯಿತು; ತಮ್ಮ ಕಣ್ಣುಗಳನ್ನೇ ತಾವು ನಂಬದಾದರು. ತಾವು ಇಲ್ಲಿಯ ವರೆಗೆ ನೋಡುತ್ತಿದ್ದ ತಿಳಿನೀರಿನ ಹೊಂಡದ ಹತ್ತಿರದ ದೃಶ್ಯವೇ ಬದಲಾಗಿತ್ತು. ಅಲ್ಲಿ ಅನೇಕ ಪರ್ಣಕುಟೀರಗಳು ನಿರ್ಮಾಣವಾಗಿಬಿಟ್ಟಿವೆ. ಗ್ರಾಮದ ಜನರು ಅವಕ್ಕಾಗಿ ನಿಂತುನೋಡುವಷ್ಟರಲ್ಲಿ, ನಾಲ್ಕೈದು ಜನ ವಟುಗಳು: ಚೆನ್ನಬಸವಣ್ಣನವರನ್ನೂ, ಜಂಗಮರನ್ನೂ ಎದುರುಗೊಳ್ಳಲು ಓಡಿಬಂದರು. ಓಡಿ ಬಂದವರೇ ಚೆನ್ನಬಸವಣ್ಣನವರ ಪಾದಾರವಿಂದಗಳಲ್ಲಿ ಅತ್ಯಂತ ಭಯ-ಭಕ್ತಿಗಳಿಂದ ಸಾಷ್ಟಾಂಗ ಪ್ರಣಾಮಂಗಳನರ್ಪಿಸಿ, ಎಲ್ಲ ವಿರಕ್ತರಿಗೂ ನಮಸ್ಕರಿಸಿ ಸುಸ್ವಾಗತವನ್ನು ಬಯಸಿದರು.

ಬಿಜಯಂಗೈವುದು, ಷಟ್‌ಸ್ಥಲ ಸಿದ್ಧಾಂತ ಧ್ವಜವನ್ನು ಹಾರಿಸಿದ ಮಹಾನುಭಾವಿ ಚೆನ್ನಬಸವಣ್ಣನವರೇ ಬಿಜಯಂಗೈವುದು.

ಮಹಾನುಭಾವಿ ಚಿಕ್ಕದಣ್ಣಾಯಕರೇ ಬಿಜಯಂಗೈವುದು.
ಶರಣ ಧರ್ಮದ ನೆಚ್ಚಿನ ನಾಯಕರೇ ಬಿಜಯಂಗೈವುದು.
ವಿಶ್ವಜ್ಯೋತಿಬಸವಣ್ಣನವರ ಅತ್ಯಂತ ಪ್ರೀತಿಪಾತ್ರರೇ-
ಬಿಜಯಂಗೈವುದು.
ಶರಣ ಧರ್ಮೋದ್ಧಾರಕರೇ ಬಿಜಯಂಗೈವುದು.
ಶರಣ ಧರ್ಮಕ್ಕೆ ಜಯವಾಗಲಿ.
ವಿಶ್ವಜ್ಯೋತಿ ಬಸವಣ್ಣನವರಿಗೆ ಜಯವಾಗಲಿ.
ಚೆನ್ನಬಸವಣ್ಣನವರಿಗೆ ಜಯವಾಗಲಿ.
ಚಿಕ್ಕದಣ್ಣಾಯಕರಿಗೆ ಜಯವಾಗಲಿ;

ಎಂಬ ಜಯಘೋಷಗಳಿಂದ, ಹರ್ಷೋದ್ಗಾರಗಳಿಂದ ಸುಸ್ವಾಗತವನ್ನು ನೀಡಿದರು. ಗ್ರಾಮದ ಸಮಸ್ತರೂ ಜಯಘೋಷದಲ್ಲಿ ಪಾಲ್ಗೊಂಡಿದ್ದರು. ಚೆನ್ನಬಸವಣ್ಣನವರು ಪರಮಾನಂದದಿಂದ ಅವರನ್ನು ಹಿಂಬಾಲಿಸಿ ಹೊರಟರು. ಮಹಾಸ್ವಾಮಿಗಳವರ ಗವಿಯ ಹತ್ತಿರ ಬೃಹದಾಕಾರವಾದ ಹಾಗೂ ಭವ್ಯ

ವಾದ ಒಂದು ಪರ್ಣಕುಟೀರವು ಕಾಣಿಸಿತು. ಅಲ್ಲಿ ಚೆನ್ನಬಸವಣ್ಣನವರಿಗಾಗಿ, ಶರಣ ಜಂಗಮರಿಗಾಗಿ ಹಲವು ವರ್ಷಗಳಿಂದ ದಾರಿಕಾಯುತ್ತಿದ್ದ, ಗುರು-ಸಿದ್ಧೇಶ್ವರ ಮಹಾಸ್ವಾಮಿಗಳವರು ಎದುರುಗೊಳ್ಳಲು ಸಿದ್ಧರಾಗಿನಿಂತಿದ್ದರು. ಅಜಾನುಬಾಹುಗಳೂ, ವಿಶಾಲವಾದ ಹಣೆಯುಳ್ಳವರೂ, ತ್ರಿಪುಂಡ್ರ ಭಸ್ಮ ದಾರಿಗಳೂ, ಸೂರ್ಯ-ಚಂದ್ರರಂತೆ ಹೊಳೆಯುವ ಕಣ್ಣುಗಳುಳ್ಳವರೂ, ಕಾವಿ ಲಾಂಛನವನ್ನು ಧರಿಸಿದವರೂ, ಗಡ್ಡ-ಮೀಸೆ-ಜಡೆಗಳಿಂದ ತಪಸ್ವಿಗಳ ಕಾಂತಿಯುಳ್ಳವರೂ ಆದ ಗುರುಸಿದ್ಧೇಶ್ವರರನ್ನು ಕಂಡು, ಚೆನ್ನಬಸವಣ್ಣನವರು ಆನಂದಪರವಶರಾದರು. ಶ್ರೀ ಗುರುಸಿದ್ಧೇಶ್ವರರು, ಚೆನ್ನಬಸವಣ್ಣ-ನವರನ್ನು ಅತ್ಯಾನಂದದಿಂದ ಬರಮಾಡಿಕೊಂಡರು. ಒಬ್ಬರಿಗೊಬ್ಬರು ಸಾಷ್ಟಾಂಗಪ್ರಣಾಮಂಗಳನರ್ಪಿಸಿ, ಉಭಯರೂ ಆಲಿಂಗನ ಸತ್ಕಾರದಿಂದ ಆನಂದಬಾಷ್ಪಗಳನ್ನು ಸುರಿಸಿದರು. ಈ ದೃಶ್ಯವನ್ನು ಕಂಡ ಸಮಸ್ತ ಶರಣ ಜಂಗಮರ ಕಣ್ಣಗಳಲ್ಲೂ ಆನಂದಬಾಷ್ಪಗಳುದುರಿದುವು.

ಆಗ ಗುರುಸಿದ್ಧೇಶ್ವರ ಮಹಾಸ್ವಾಮಿಗಳವರು—

ಚಿಕ್ಕದಣ್ಣಾಯಕರೇ! ತಾವು ಬಹಳ ದೂರದಿಂದ ಕ್ರಮಿಸಿ ಬಂದಿರುವ-ದರಿಂದ ತಮಗೆ ಬಹಳ ಪರಿಶ್ರಮವಾಗಿದೆ. ಆದ್ದರಿಂದ ಮೊದಲು ತಾವೂ ತಮ್ಮ ಸಕಲ ಪರಿವಾರದವರೂ ಸ್ನಾನ-ಲಿಂಗಾರ್ಚನೆಗಳನ್ನು ಮುಗಿಸಿ ಕೊಂಡು ಅರ್ಪಿತವಾದ ನಂತರ, ಸ್ವಲ್ಪಸಮಯ ವಿಶ್ರಾಂತಿ ಪಡೆದ ನಂತರ ಮುಂದಿನ ವಿಷಯ ಚರ್ಚಿಸಬಹುದು ಎಂದು ಬಿನ್ನಹಮಾಡಿಕೊಂಡರು. ಆಗ ಚೆನ್ನಬಸವಣ್ಣನವರಿಗೆ ಆಶ್ಚರ್ಯವಾಯಿತು. ಕೇವಲ ಮೂರು-ನಾಲ್ಕು ವಟುಗಳ ಹೊರತು ಆಶ್ರಮದಲ್ಲಿ ಮತ್ತಾರೂ ಇಲ್ಲ. ಮೇಲಾಗಿ ಯಾವ ತರದ ಕಾಳುಕಡಿ ಸಾಮಗ್ರಿಗಳೂ ಕಾಣಿಸುತ್ತಿಲ್ಲ. ಅಂದ ಮೇಲೆ, ಸಹಸ್ರಾರು ಶರಣ ವಿರಕ್ತರನ್ನು ಇವರು ಹೇಗೆ ತೃಪ್ತಿಪಡಿಸುತ್ತಾರೆ? ಎಂದು ಸೋಜಿಗವಾಯಿತು, ಆದರೂ, ಚೆನ್ನಬಸವಣ್ಣನವರು ವಿರಕ್ತರೊಡನೆ ಸ್ನಾನಕ್ಕಾಗಿ ತಿಳಿನೀರಿನ ಹೊಂಡಕ್ಕೆ ಹೋಗಿ ಸ್ನಾನ ಮುಗಿಸಿಕೊಂಡು ಬರುವಾಗ, ತಮ-ತಮಗೆ ಬೇಕಾದಷ್ಟು ಬಿಲ್ವಪತ್ರೆ, ಪುಷ್ಪಗಳನ್ನು ಎತ್ತಿಕೊಂಡು ಆಶ್ರಮದ ಕಡೆ ಬಂದರು. ವಿರಕ್ತರು ಬರುವವರೊಳಗಾಗಿ ಆಶ್ರಮದಲ್ಲಿ ಎಲ್ಲಾ ಜಂಗಮರಿಗೆ,

ಲಿಂಗಾರ್ಚನೆಗಾಗಿ ಬೇಕಾದ ಎಲ್ಲ ಪೂಜಾ ಸಾಮಗ್ರಿಗಳೂ ಸಿದ್ಧವಾಗಿದ್ದವು. ಶಿವಪೂಜಾ ಮಂದಿರ(ಬೃಹದಾಕಾರವಾದ) ಸಿದ್ಧವಾಗಿತ್ತು. ಒಳಗೆ ಪ್ರತಿಯೊಬ್ಬರಿಗೂ ಪ್ರತ್ಯೇಕ-ಪ್ರತ್ಯೇಕವಾದ ಪೀಠೋಪಕರಣಗಳೂ, ಶಿವಪೂಜಾ ಸಾಮಗ್ರಿಗಳೂ ಸಿದ್ಧವಾಗಿದ್ದವು. ಯಾವ ವಸ್ತುವಿಗೂ ಕೊರತೆಯಿಲ್ಲದಂತಾಗಿತ್ತು; ವಿರಕ್ತರೆಲ್ಲರೂ ಇದನ್ನು ಕಂಡು ಆಶ್ಚರ್ಯಚಕಿತರಾದರು. ಪಾದೋದಕ ಪ್ರಸಾದವು ವೈಭವೋಪೇತವಾಗಿ ಜರುಗಿತು. ಪಾದಪೂಜಾ, ಪಾದೋದಕದ ನಂತರ, ಪ್ರಸಾದಕ್ಕೆ ಅನೇಕ ತರತರದ, ರುಚಿ-ರುಚಿಕರವಾದ ಭಕ್ಷ್ಯಗಳನ್ನು ಮಡಿಯಿಂದ ಸಹಸ್ರಾರು ಜನ ಓಡಾಡಿ ಎಡೆ ಮಾಡುತ್ತಿದ್ದರು. ಸಮಸ್ತ ಜಂಗಮ ವಿರಕ್ತರೂ ಪರಮಾನಂದದಿಂದ ಪ್ರಸಾದ ಸ್ವೀಕರಿಸಿ, ತೃಪ್ತಿಹೊಂದಿ ಶಿವಾನುಭವ ಮುಗಿಸಿಕೊಂಡು ಆಶ್ರಮದ ಹೊರಗೆ ಬಂದರು.

ಇದನ್ನೆಲ್ಲಾ ದೂರದಿಂದ ನಿಂತುನೋಡುತ್ತಿದ್ದ ಗ್ರಾಮದ ಜನರಿಗೆ ದಿಕ್ಕುತೋಚದಂತಾಯಿತು. ಕೇವಲ ಒಂದೇ ದಿವಸದಲ್ಲಿ ಇಷ್ಟೆಲ್ಲಾ ಕುಟೀರಗಳು, ಇಷ್ಟೆಲ್ಲಾ ಸುಸಜ್ಜಿತ ವ್ಯವಸ್ಥೆ, ಈ ರೀತಿ ಸಹಸ್ರಾರು ಶರಣ ವಿರಕ್ತರಿಗೆ ಪ್ರಸಾದವಿತರಣೆ ಹೇಗೆ ಸಾಧ್ಯವಾಯಿತು? ಇದನ್ನೆಲ್ಲಾ ನಿಂತು ಮಾಡಿಸಿದರ್‍ಯಾರು? ಯಾವ ಊರಿನವರು? ಏನೂ ತೋಚದೆ ದಿಗ್ಭ್ರಾಂತರಾಗಿ, ತುಟಿ ಪಿಟ್ಟೆನ್ನದೆ, ಒಬ್ಬರ ಮುಖ ಒಬ್ಬರು ನೋಡುತ್ತ, ಮಿಸುಕದೆ ಗೊಂಬೆಗಳಂತೆ ನಿಂತಿದ್ದರು. ಹೊರಗೆ ಬಂದ ವಿರಕ್ತರು ಇವರನ್ನು ನೋಡಿ—

**ವಿರಕ್ತರು:**– ಏನಪ್ಪಾ, ನೀವೇ ಅಲ್ಲವೆ ನಮಗೆ ದಾರಿತೋರಿಸಿದವರು?

**ಗ್ರಾಮಸ್ಥರು:**—ಹೌದ್ರಿ ಬುದ್ಧಿ ! ನಾವೇ.

**ವಿರಕ್ತರು:**—ಹಾಗಾದರೆ, ಇಲ್ಲೇ ಯಾಕೆ ನಿಂತಿದ್ದೀರಿ? ನೀವೆಲ್ಲಾ ನಿಮ್ಮ-ನಿಮ್ಮ ಮನೆಗಳಿಗೆ ಹೋಗಿರಬಹುದೆಂದು ತಿಳಿದಿದ್ದೆವು.

**ಗ್ರಾಮಸ್ಥರು:**—ಬುದ್ಧೀ ! ನಾವು ಇಲ್ಲೇ ನಿಂತಿದೀವಿ ಅನ್ನೋದನ್ನ ಮರೆತುಬಿಟ್ಟಿದ್ವಿ. ನಮಗೂ ಮನಿ-ಮಾರ ಐತಿ, ಹೆಂಡರ-ಮಕ್ಕಳ ಅದಾರ ಮನಿಗೆ ಹೋಗಬೇಕು ಅನ್ನೂ ಖಬರ ಸುದಾ ಉಳಿದಿರಲಿಲ್ಲಾ; ಹೀಂಗಾಗಿ ನಾವು ಎಲ್ಲಾ ನೋಡ್ತಾ ನಿಂತ್ಬಿಟ್ಟಿದ್ವಿ.

ವಿರಕ್ತರು:—ಶಿವಶಿವಾ! ಇದೇನು ಹೀಗೆಲ್ಲಾ ಹೇಳುತ್ತಿರುವಿರಿ? ನಿಮಗೆಲ್ಲಾ ಈ ರೀತಿ ಆಗಲು ಕಾರಣ?

ಗ್ರಾಮಸ್ಥರು:—ಅದೇ ತಿಳಿಯಲ್ದಂಗ ಆಗೇತರಿ. ನಾವು ಯಾರು? ಯಾವ ಊರಿನವರು? ಯಾವ ಊರಿಗ ಬಂದೀವಿ? ನಾವ್ ನಮ್ಮ ಊರಾಗ ಇದ್ದೀವೋ, ಬೇರೆ ಯಾವ ಊರಾಗಾರಾ ಬಂದೀವೋ ಅನ್ನಂಗಾಗ್ಯಾಂಗ್ಯೆತಿ.

ವಿರಕ್ತರು:—ಶಿವ ಶಿವಾ! ಇದೇನ್ರಪಾ, ಹಿಂಗ್ಯಂತೀರಾ? ನಿಮ್ಮ ಪೂಬಳ್ಳಿ ಗ್ರಾಮದ ಭಕ್ತರು ಸಾಮಾನ್ಯರಲ್ಲ, ಬಹಳ ಭಕ್ತಿವಂತರು, ಜಂಗಮ ಸೇವಾ ದುರಂಧರರು. ನಿಜವಾಗಲೂ ನಾವು ಅನೇಕ ರಾಜ್ಯಗಳನ್ನು ಸಂಚರಿಸಿ ಬಂದಿದ್ದೇವೆ. ಆದರೆ ಈ ತರದ ಆದರ-ಸತ್ಕಾರ, ಈ ತರದ ಜಂಗಮ ಭಕ್ತಿಯನ್ನು ಕಲ್ಯಾಣ ಬಿಟ್ಟ ನಂತರ ಇಲ್ಲೇ ಕಂಡಿದ್ದು. ಇಡೀ ಗ್ರಾಮದ ಜನರೇ ಜಂಗಮ ಸೇವೆಗೆ ಟೊಂಕಕಟ್ಟಿ ನಿಂತಿದ್ದೀರಿ; ಅಂದ ಮೇಲೆ ಇದಕ್ಕಿಂತ ಹೆಚ್ಚಿನ ಭಕ್ತಿ ಯಾವುದಿದೆ?

ಗ್ರಾಮಸ್ಥರು:—ಏನಂದ್ರಿ ಬುದ್ಧಿ! ಪೂಬಳ್ಳಿ ಗ್ರಾಮದವರು ಸೇವಾ ಮಾಡಿದ್ರ? ಟೊಂಕಕಟ್ಟಿ ನಿಂತಿದ್ರ? ಯಾವಾಗ? ಎಲ್ಲಿ? ನಾವೂ ಪೂಬಳ್ಳಿ-ಯವರೇ ಸ್ವತಃ ಇಲ್ಲ್ ನಿಂತಿರುವಾಗ, ಅವ ಯಾಂವರೀ ಪೂಬಳ್ಳಿಯವ, ಸೇವಾ ಮಾಡಾವ, ಅವ ಯಾಂವರೀ ಟೊಂಕ ಕಟ್ಟಿದಾವ, ಟೊಂಕನೂ ಕಟ್ಟಿಲ್ಲ; ಎಮ್ಮಿ ಕರಾನೂ ಕಟ್ಟಿಲ್ಲ; ನಮ್ಮೂರವರು ಒಬ್ಬರೂ ಇದರಾಗ ಇಲ್ಲ. ನಮೂರಾವ್ರ ಅಷ್ಟೇ ಯಾಕೆ? ನಮಗ ತಿಳದ್ಹಂಗ, ನಮ್ಮ ಆಸ-ಪಾಸ ಊರಿನವರೂ ಅಲ್ಲ. ಎಲ್ಲಿಯವರೋ ಏನ್ ತಾನೋ?

ವಿರಕ್ತರು:—ಹಾಗಾದರೆ, ಇಲ್ಲಿಯ ವರೆಗೆ ಸೇವೆಗಾಗಿ ನಿಂತಿದ್ದ ಭಕ್ತ ಜನರು ನಿಮ್ಮ ಪೂಬಳ್ಳಿಯವರಲ್ಲವೇ? ನಮಗೆಲ್ಲಾ ಪ್ರಸಾದವನ್ನು ಮಡಿಯಿಂದ ತಂದು ಎಡೆ ಮಾಡಿದವರು ನಿಮ್ಮ ಪೂಬಳ್ಳಿಯವರಲ್ಲವೇ?

ಗ್ರಾಮಸ್ಥರು:—ಅಲ್ರೀ ಬುದ್ಧಿ! ದೇವರಾಣೆ, ನಮ್ಮಪ್ಪರಾಣೆ ಅಲ್ಲ. ಅವರೆಲ್ಲಾ ಯಾರು ಅಂತ ನಾವು ಸಹಾ ತಿಳಿಯದೆ ಧಿಂಗ್‌ಬಡದ ನಿಂತಿದ್ದೇವೆ. ಇವರ ಯಾರೂ ನಮ್ಮೂರವರು ಅಲ್ಲ, ನಮ್ಮೂರವರು ಪ್ರಸಾದಾನೂ ತಂದಿಲ್ಲ

ಯಡೀನೂ ಮಾಡಿಲ್ಲ. ಅಷ್ಟೇ ಯಾಕೆ, ತಿರುಗಿ ಕೇಳಿದರೆ ನಮ್ಮೂರವರು ಒಂದು ಕಾಳೂ ಕೊಟ್ಟಿಲ್ಲ,ಒಂದು ಕಡ್ಡೀನೂ ಕೊಟ್ಟಿಲ್ಲ, ಒಂದು ದುಡ್ಡೂ ನೂ ಕೊಟ್ಟಿಲ್ಲ. ನಮ್ಮೂರಾಗಿನ ಮಂದಿ ಹಾಗಿರಲಿ, ಇಲ್ಲಿಗೆ ನಮ್ಮೂರಾಗಿನ ಒಂದು ಚಿಕ್ಕಿನಮರೀನೂ ಸೇವೆಗೆ ಬಂದಿಲ್ಲ. ಇದಕ್ಕಿಂತ ಹೆಚ್ಚಿಗೆ ನಮಗ ಹೇಳಾಕ ಬರದ್ಹಂಗಾಗೈತಿ.

**ವಿರಕ್ತರು:**—ಹಾಗಾದರೆ, ಇದೆಲ್ಲಾ ಇಲ್ಲಿಯ ಶಿವಯೋಗೀಶ್ವರರ ಮಹಿಮೆಯೆಂದೇ ಕಾಣುತ್ತದೆ.

**ಗ್ರಾಮಸ್ಥರು:**-ಯಾರಿಗ್ಗೊತ್ತ್ರೀ ಬುದ್ಧೀ ! ಏನ ಅವರ ಮಹಿಮಾನೇ ಐತೋ ಏನ? ಬಂದಿರೋ ನಿಮ್ ಮಯಿಮಾನೇ ಐತೋ? ಎಲ್ಲಾ ಬಿಟ್ಟ ಏನ ನಮ್ಮ್ ತಲೀನೆ ಕೆಟ್ಟೈತೋ ತಿಳಿವೊಲ್ಲದಾಗೈತಿ?

ಇಷ್ಟೊತ್ತು ಇದೆಲ್ಲಾ, ಬಂದಿರೋ ನಿಮ್ಮ್ ಮಯಿಮಾ ಅನಕ್ಕೊಂಡಿದ್ವಿ. ಆ ಓಡಾಡವ್ರೆಲ್ಲಾ ನಿಮ್ಮ್ ಂದಿನೇ ಅಂದಕ್ಕೊಂಡಿದ್ವಿ. ಈಗ ನೀವೇ ನಮ್ಮನ್ನ ಬಂದ್ ಕೇಳ್ತಿದ್ದೀರಿ. ಅಂದ ಮೇಲೆ—

**ವಿರಕ್ತರು:**—ಅಂದ ಮೇಲೆ-ಗಿಂದಮೇಲೆ ಯಾಕರಪ್ಪಾ, ನಿಃಸಂಶಯ ವಾಗಿ ಇದೆಲ್ಲಾ ಗುರುಸಿದ್ಧೇಶ್ವರರ ಲೀಲೆ ! ಅವರ ಮಹಿಮೆ !! ಅವರ ಪವಾಡ !!!

**ಗ್ರಾಮಸ್ಥರು:**— ಗುರುಸಿದ್ಧೇಶ್ವರರು ? ಅವರ ಯಾರ್ರೆಪಾ, ಗುರುಸಿದ್ಧೇಶ್ವರರು ?

**ವಿರಕ್ತರು:**—ಏನು? ಈ ಊರಿನವರಾದ ನಿಮಗೆ ಗುರುಸಿದ್ಧೇಶ್ವರರು ಗೊತ್ತಿಲ್ಲವೆ? ಅವರ ಈ ತಿಳಿನೀರಿನ ಹೊಂಡದ ಹತ್ತಿರವಿರುವ, ನಾವ್ ನಿಂತಿರುವ ಆಶ್ರಮದ ಮಹಾಸ್ವಾಮಿಗಳವರು.

**ಗ್ರಾಮಸ್ಥರು:**—ಹಿಂಗರೀ, ಶಿವ ಶಿವಾ! ಇಲ್ಲೀವರೆಗೆ ನಮಗೆ ಏನೂ ಗೊತ್ತಿದ್ದಿಲ್ರಿ. ನಾವು ಹುಚ್ಚಸ್ವಾಮಿ-ಹುಚ್ಚಸ್ವಾಮಿ ಅನ್ ತಿದ್ ವಿ.

**ವಿರಕ್ತರು:**—ಶಿವಶಿವಾ! ಅವರು ಹುಚ್ಚರೇ, ಅವರು ಹುಚ್ಚರಲ್ಲಾ. ಅವರನ್ನ ಹುಚ್ಚರೆಂದು ತಿಳಿದಿದ್ದ ನೀವು ಹುಚ್ಚರು.

**ಗ್ರಾಮಸ್ಥರು:**—ಖರೇ ಅಂದ್ರಿ ನೋಡ್ರಪಾ, ಈಗ ಖರೇ ಖರೇ ನಾವೇ ಹುಚ್ಚರಾದ್ವಿ. ಅಲ್ರೀ ಬುದ್ಧಿ ! ನಿನ್ನೀತನಕ ಇಲ್ಲಿ ಒಂದು ಗುಡಿಸಲೂ ಇರಲಿಲ್ಲ; ಆ ಸ್ವಾಮಿಗಳ ಹೊರ್ತ ಮತ್ತೊಬ್ಬರು ಬೇರೆ ಯಾರ್ಯಾರು ಇದ್ದಿದ್ದಿಲ್ಲ. ಇನ್ನೊಬ್ಬ ಮನುಷ್ಯರ ಸುಳಿವು ಸಹಾ ಇರಲಿಲ್ಲ. ಅಂತಾವರಾಗ ಬೆಳಗಾಗೂ-ದರೊಳಗಾಗಿ ಇಷ್ಟೆಲ್ಲಾ ಆಶ್ರಮಗೋಳು, ಎದುರುಗೊಳ್ಳೋಕ ವಟುಗೋಳು, ಸೇವಾ ಮಾಡೋಕ ಸಾವಿರಾರ ಮಂದಿ ಸೇವಕರು, ಇವರೆಲ್ಲಾ ಮಂದಿ, ಬಂದ್ರು, ಇಷ್ಟೆಲ್ಲಾ ಸಾಮಾನು ಹೇಗ ಬಂತೂ ಅನ್ನೂದ ನಮಗ ತಿಳೀ-ದ್ಹಾಂಗ ಈಗ ನೀವು ಅಂದ್ಹಂಗ ನಾವೇ ಹುಚ್ಚರಾಗೀವ್ರಿ. ಇಷ್ಟದಿನ ಅವರ್‌ಗೇ ಹುಚ್ಚ ಅಂತಿದ್ವಿ, ಇಂದ ನಮ್ಮನ್ನೇ ಹುಚ್ಚರನ್ನ ಮಾಡಿಬಿಟ್ರು.

**ವಿರಕರು:**—ಹೌದರೆಪ್ಪಾ, ನಮ್ಮ ಚನ್ನಬಸವಣ್ಣನವರು ಸಹಾ ಬಹಳ ಸಂತೋಷಪಟ್ಟರು.

**ಗ್ರಾಮಸ್ಥರು:**—ಚೆನ್ನಬಸವಣ್ಣನವರು ? ಯಾವ ಚೆನ್ನಬಸವಣ್ಣ-ನವರು ?

**ವಿರಕ್ತರು:**— ಮತ್ಯಾವ ಚೆನ್ನಬಸವಣ್ಣನವರು ? ಕಲ್ಯಾಣದ ಜಗಜ್ಜ್ಯೋತಿಬಸವಣ್ಣನವರ ಸೋದರಳಿಯಂದಿರಾದ ಚೆನ್ನಬಸವಣ್ಣನವರು!

**ಗ್ರಾಮಸ್ಥರು:**—ಆಂಂಂ, ಶಿವ ಶಿವಾ ಇಲ್ಲಿಗೆ ಬಂದಾರೇನ್ರಿ ಬುದ್ಧಿ ! ಅವರೆಲ್ಲದಾರೆ ?

**ವಿರಕ್ತರು:**—ಅಯ್ಯೋ ಹುಚ್ಚಪ್ಪಗಳಿರಾ, ನಿಮ್ಮನ್ನ ಈ ಊರಿಗೆ ಬಂದ ಕೂಡಲೇ ಆಶ್ರಮಕ್ಕೆ ದಾರಿ ತೋರಿಸ್ರಿ ಬನ್ನಿರಿ ಎಂದು ನಿಮ್ಮನ್ನು ಕರೆದುಕೊಂಡು ಬಂದ್ರಲ್ಲಾ ಅವರೇ ಚೆನ್ನಬಸವಣ್ಣನವರು.

**ಗ್ರಾಮಸ್ಥರು:**—ಅಯ್ಯೋ ನಾವು ಮಹಾಪಾಪಿಗಳು. ಕಲ್ಯಾಣದ ಚೆನ್ನಬಸವಣ್ಣನವರು ನಮ್ಮನ್ನೆ ಮಾತಾಡಿಸಿದರೂ, ನಮಗೆ ಅವರ ಬಗೆಗೆ ತಿಳೀಲಿಲ್ಲವಲ್ಲಾ. ಇರಲಿ ಬುದ್ಧಿ,ಈಗ ನಾವ ಅವರ ಪಾದಕ್ಕೆ ಬೀಳಬೇಕಂತೀವ ತುಸು ಅವರನ್ನ ತೋರಸ್ತಿರಾ ಎಂದು ಕೇಳಿದರು.

**ವಿರಕ್ತರು:**—ಅವಶ್ಯವಾಗಿ ಬನ್ನಿರಿ. ಎಂದು ಅವರನ್ನು ಒಳಗೆ ಕರೆದು ಕೊಂಡು ಹೋಗಿ ದರ್ಶನಮಾಡಿಸಿದರು. ಗ್ರಾಮಸ್ಥರು ಚೆನ್ನಬಸವಣ್ಣನವರ ಹಾಗೂ ಶ್ರೀ ಗುರುಸಿದ್ಧೇಶ್ವರರ ಪಾದಗಳಿಗೆ ನಮಸ್ಕರಿಸಿ ಬಂದರು.

## ಕಪ್ಪೆ ಮತ್ತು ಹಾವಿನ ಪವಾಡ :

ಮರುದಿವಸ ಮೂರುಸಾವಿರ ವಿರಕ್ತರೆಲ್ಲರೂ ಆಶ್ರಮದ ವಟುಗಳ ಸಂಗಡ ಸಂಚಾರಕ್ಕೆಂದು ಹೊರಟರು. ದಾರಿಯಲ್ಲಿ ಒಂದು ಕಪ್ಪೆಯು ಬಿಸಿಲಿನ ತಾಪಕ್ಕೆ ಸಂಕಟಪಡುತ್ತಿರುವಾಗ, ನೆರಳಿನ ಆಶ್ರಯವನ್ನು ಹುಡುಕಿಕೊಂಡು ಹೊರಟಿರುವಾಗ ಒಂದು ಹಾವು ಆ ಕಪ್ಪೆಯನ್ನು ಕಂಡು, ಅದರತ್ತ ಸರಸರ ಎಂದು ಧಾವಿಸಿ ಬರುತ್ತಿತ್ತು. ಅದನ್ನು ಕಂಡು ವಿರಕ್ತರು ಸ್ತಬ್ಧರಾಗಿ ನಿಂತಿರುವಾಗ, ಆಶ್ರಮದ ವಟುಗಳು ಗುರುಸಿದ್ಧೇಶ್ವರಾ ! ಗುರುಸಿದ್ಧೇಶ್ವರಾ !! ಎಂದು ಕೂಗಿದರು. ಕೂಡಲೇ ಸರ್ಪವು ಕಪ್ಪೆಯ ಹತ್ತಿರ ಬಂದು, ಹೆಡೆಯೆತ್ತಿ ಕಪ್ಪೆಗೆ ತನ್ನ ಹೆಡೆಯಿಂದ ನೆರಳನ್ನು ಮಾಡಿ ಆಶ್ರಯವಿತ್ತು ನಿಂತಿತು; ಜಂಗಮರಿಗೆಲ್ಲ ಆಶ್ಚರ್ಯವಾಯಿತು.

## ವ್ಯಾಘ್ರ ಶರಣಾಗತಿ :

ಮುಂದೆ ಸ್ವಲ್ಪದೂರ ಹೋಗುವದರೊಳಗೆ, ಒಂದು ಹಸಿದ ದೊಡ್ಡ ಭಯಂಕರವಾದ ಹುಲಿಯು ಆರ್ಭಟಿಸುತ್ತಾ ಎದುರಿಗೆ ಬರುತ್ತಿತ್ತು. ಮತ್ತೆ ಮೊದಲಿನಂತೆ ವಟುಗಳು ಗುರುಸಿದ್ಧೇಶ್ವರಾ ! ಗುರುಸಿದ್ಧೇಶ್ವರಾ!! ಎಂದು ಸ್ಮರಿಸಿದರು. ತತ್ ಕ್ಷಣವೇ ಆ ಭಯಂಕರವಾದ ಹುಲಿಯು ಶಾಂತತೆಯಿಂದ ಸಮಾಧಾನವಾಗಿ ಬಂದು, ವಿರಕ್ತರಿಗೆ ನಮಸ್ಕರಿಸಿ ಹೋಯಿತು.

ಈ ಮೇಲಿನ ಎರಡು ಘಟನೆಗಳನ್ನು (ಪವಾಡಗಳನ್ನು) ಪ್ರತ್ಯಕ್ಷಕಂಡ ವಿರಕ್ತರು, ಚೆನ್ನಬಸವಣ್ಣನವರ ಸನ್ನಿಧಿಯಲ್ಲಿ ಅರಿಕೆ ಮಾಡಿಕೊಂಡರು. ಹಾಗಾದರೆ ಇದು ಪುಣ್ಯಭೂಮಿ, ಪವಿತ್ರಸ್ಥಾನ. ನಮ್ಮ ಶರಣ ಜಂಗಮರ ವಾಸಕ್ಕೆ ಹಾಗೂ ಶರಣ ಧರ್ಮ ಪ್ರಸಾರ ಕಾರ್ಯಕ್ಕೆ ಇದೇ ಯೋಗ್ಯವಾದ ಸ್ಥಳವೆಂದು ನಿಶ್ಚಯಿಸಿ, ಈ ವಿಷಯವನ್ನು ಗುರುಸಿದ್ಧೇಶ್ವರರಲ್ಲಿ ಸೂಚಿಸಲು ನಿಶ್ಚಯಿಸಿದರು. ಚೆನ್ನಬಸವಣ್ಣನವರು, ಗುರುಸಿದ್ಧೇಶ್ವರರನ್ನು ಕಾಣಲು ಬರಬೇಕೆಂದು ಸಂಕಲ್ಪ ಮಾಡಿಕೊಳ್ಳುವಷ್ಟರಲ್ಲೇ, ಗುರುಸಿದ್ಧೇಶ್ವರರು ಸ್ವತಃ ಚೆನ್ನಬಸವಣ್ಣನವರ ದರ್ಶನಕ್ಕೆ ಬಂದರು.

ಎತ್ತರವಾದ ಒಂದು ಕಟ್ಟೆಯ ಮೇಲೆ ಚೆನ್ನಬಸವಣ್ಣನವರೂ, ಗುರುಸಿದ್ಧೇಶ್ವರರೂ ಮುಹೂರ್ತಮಾಡಿದರು. ಮೂರುಸಾವಿರ ವಿರಕ್ತರು ಹಾಗೂ ಎಲ್ಲ ಶರಣರು ಕೆಳಗೆ ಸುತ್ತುವರೆದು ಕುಳಿತರು.

**ಚೆನ್ನಬಸವಣ್ಣನವರು:**—ಗುರುಸಿದ್ದೇಶ್ವರ ಮಹಾಸ್ವಾಮಿಗಳವರೇ! ತಮ್ಮಿಂದ ಒಂದು ಉಪಕಾರವಾಗಬೇಕಾಗಿದೆ.

**ಗುರುಸಿದ್ಧೇಶ್ವರರು:**-ಉಪಕಾರವೆ? ಕೃಪೆ ಮಾಡಿ ಹಾಗೆನ್ನಬೇಡಿರಿ; ಅಪ್ಪಣೆ ಎಂದು ನಿರೂಪಮಾಡಿರಿ.

ಬಸವಾ! ಬಸವಾ!! ತಾವು ಮಹಾಮಹಿಮರು. ಶರಣ ಧರ್ಮಕ್ಕಾಗಿ ಪ್ರಾಣವನ್ನೇ ಮುಡುಪಾಗಿಟ್ಟು, ಅನಂತ ಕಷ್ಟ ನಷ್ಟಗಳನ್ನು ಅನುಭವಿಸಿ, ಸಹಿಸಿ ಬಂದಿರುವವರು; ತಮ್ಮಂಥ ಮಹಾತ್ಮರು ಈ ರೀತಿ ಹೇಳಬಾರದು. ಉಪಕಾರ ಮಾಡಲು ನಾನೆಷ್ಟರವನು? ಅಪ್ಪಣೆ ಎಂದು ನಿರೂಪಮಾಡಿರಿ-ತಾವು ಮಾಡುವುದು ಅಪ್ಪಣೆ, ನಾನು ಮಾಡುವುದು ಕರ್ತವ್ಯಅಥವಾ ಸ್ವಾಮಿ ಸೇವೆ. ನಿಮ್ಮೆಲ್ಲರ ಸೇವೆ ಮಾಡುವ ಸಲುವಾಗಿಯೇ ನಾನು ಹಲವು ವರ್ಷ-ಗಳಿಂದ ನಿಮ್ಮೆಲ್ಲರ ದಾರಿ ಕಾಯುತ್ತಾ ಇಲ್ಲಿ ಕುಳಿತಿದ್ದೆ. ಇಂದು ಆ ಸುಯೋಗ ದೊರೆತಿದ್ದಕ್ಕೆ ನಾನು ಧನ್ಯನಾದೆ.

**ಚೆನ್ನಬಸವಣ್ಣನವರು:**—ಧನ್ಯ-ಧನ್ಯ ನಾನೇ ಧನ್ಯ! ನಿಮ್ಮಂಥಹ ಮಹಾಮಹಿಮರನ್ನು ಪಡೆದ ಶರಣ ಧರ್ಮವೇ ಧನ್ಯ! ನಿಮ್ಮಂತಹ ಮಹಾತ್ಮರಿಗೆ ಜನ್ಮವಿತ್ತ ಕನ್ನಡಾಂಬೆಯು ಧನ್ಯಳು! ತುಂಬಿದ ಕೊಡ ತುಳುಕುವುದಿಲ್ಲ-ವೆಂಬ ಹಿರಿಯರ ನಾಣ್ನುಡಿಗೆ ತಾವೇ ಸಾಕ್ಷಿ. ಇರಲಿ, ನಾನೂ-ನೀವೂ ಕೂಡಿಯೇ ಶರಣ ಧರ್ಮದ ಸೇವೆ ಮಾಡೋಣ.

**ಗುರುಸಿದ್ಧೇಶ್ವರರು:**-ಅವಶ್ಯವಾಗಿ, ಏನೆಂದು ಅಪ್ಪಣೆಯಾಗಲಿ.

**ಚೆನ್ನಬಸವಣ್ಣನವರು:**—ಕಲ್ಯಾಣದ ಕ್ರಾಂತಿಯ ನಂತರ, ಶರಣ ಧರ್ಮದ ಪ್ರಚಾರಕ್ಕೆ ಹಾಗೂ ಅನುಭಾವಿಗಳ ಆತ್ಮಚಿಂತನೆಗೆ ಕಲ್ಯಾಣವನ್ನು ಬಿಟ್ಟನಂತರ, ನಮಗೆ ಅಂತಹ ಯೋಗ್ಯವಾದ ಒಂದು ಸ್ಥಳ ದೊರಕಲಿಲ್ಲ. ಈಗ ನಿಮ್ಮ ಈ ಪೂಬಳ್ಳಿಯನ್ನೇ ನಮ್ಮ ಶರಣ ಧರ್ಮದ ಕೇಂದ್ರವನ್ನಾಗಿ

ಮಾಡಿಕೊಳ್ಳಬೇಕೆಂದು ನಮ್ಮ ಸಂಕಲ್ಪವೂ, ಇಚ್ಛೆಯೂ ಆಗಿದೆ. ಇದಕ್ಕೆ ತಮ್ಮ ಅಭಿಪ್ರಾಯ ತಿಳಿದುಕೊಳ್ಳಬೇಕಾಗಿದೆ.

**ಗುರುಸಿದ್ಧೇಶ್ವರರು:**—ಪೂಬಳ್ಳಿಯನ್ನು ಶರಣಧರ್ಮದ ಕೇಂದ್ರವನ್ನಾಗಿ ಮಾಡಿಕೊಳ್ಳಲು ನನ್ನ ಸಲಹೆ, ಅಭಿಪ್ರಾಯಗಳನ್ನು ತಾವು ತಿಳಿಯಬೇಕಾಗಿದೆಯೇ? ಬಸವಾ! ಬಸವಾ! ಆಶ್ಚರ್ಯ ಪೂಬಳ್ಳಿಗೆ ನಾನು ಒಡೆಯನೇ? ಇಡೀ ವಿಶ್ವವೇ ತಮ್ಮದು ವಿಶ್ವಕಲ್ಯಾಣವನ್ನು ಸಾಧಿಸಲು ಕಂಕಣಬದ್ಧರಾಗಿ ಹೊರಟಿರುವ ತಮಗೆ ಪೂಬಳ್ಳಿಯು ಹೊರತಾಗಿದೆಯೆ? ಪೂಬಳ್ಳಿಯು ಎರಡನೆಯ ಕಲ್ಯಾಣವಾಗಲು ತಮಗೆ ಮತ್ತೊಬ್ಬರ ಸಲಹೆಯ ಅವಶ್ಯವಿದೆಯೇ? ಅದರಲ್ಲೂ ತಮ್ಮಂಥಹ ಮಹಾತ್ಮರ ಅಮೃತಹಸ್ತದಿಂದ ಉದಯವಾಗುವುದು ಪೂಬಳ್ಳಿಯ ಗ್ರಾಮದವರ ಅನಂತಕೋಟಿ ಜನ್ಮಗಳ ಪೂರ್ವಪುಣ್ಯದ ಫಲವೇ ಸೈ! ಪೂಬಳ್ಳಿಯ ಗ್ರಾಮದ ಜನರ ವತಿಯಿಂದ ಅವರ ಪ್ರತಿನಿಧಿಯಾಗಿ ನಾನೇ ತಮ್ಮ ದಿವ್ಯಸನ್ನಿಧಿಯಲ್ಲಿಬಿನ್ನಹಮಾಡಿಕೊಳ್ಳುತ್ತೇನೆ.

"ಪೂಬಳ್ಳಿ ಗ್ರಾಮದಲ್ಲಿ ಶರಣ ಧರ್ಮದ ಕೇಂದ್ರವನ್ನು ಸಂಸ್ಥಾಪಿಸಿ ನಮ್ಮನ್ನೂ, ಮಾನವ ಕೋಟಿಯನ್ನೂ ಉದ್ಧರಿಸಬೇಕೆಂದು" ಪ್ರಾರ್ಥಿಸಿದರು.

**ಚೆನ್ನಬಸವಣ್ಣನವರು:**–ಆಗಲಿ, ಅವಶ್ಯವಾಗಿ ಆಗಲಿ. ನಮ್ಮ ನಿಮ್ಮ ಆರಾಧ್ಯದೇವತೆಗಳಾದ ಶ್ರೀಮದನಾದಿ ನಿರಂಜನ ಮೂರ್ತಿ ಅಲ್ಲಮಪ್ರಭುದೇವರೂ, ವಿಶ್ವಜ್ಯೋತಿ ಬಸವಣ್ಣನವರೂ ಇದನ್ನು ನೆರವೇರಿಸಲಿ. ನಾವು ಕಲ್ಯಾಣದಿಂದ ನಮ್ಮ ಸಂಗಡ ಅತ್ಯಮೂಲ್ಯವಾದ ಅನೇಕ ಶರಣಧರ್ಮದ ಸಾರವಾಗಿರುವ, ವಚನಸಾಹಿತ್ಯಗಳ ತಾಡೋಲೆಗಳನ್ನು ತಂದಿದ್ದೇವೆ; ನಾವು ಬರುವಾಗ ದಾರಿಯಲ್ಲಿ ಕೆಲವು ಪವಿತ್ರವಾದ ಆಶ್ರಮಗಳಲ್ಲಿ (ಮಠಗಳಲ್ಲಿ) ತಪಸ್ವಿಗಳ ವಶಕ್ಕೆ ಕೆಲವು ತಾಡೋಲೆಗಳನ್ನು ಒಪ್ಪಿಸಿ ಬಂದಿದ್ದೇವೆ. ಇನ್ನೂ ಹಲವು ತಾಡೋಲೆಗಳು ಉಳಿದಿವೆ: ಅವುಗಳನ್ನು ಸುರಕ್ಷಿತವಾಗಿ ಒಂದು ಸ್ಥಳದಲ್ಲಿರಿಸಿ ಶರಣ-ಜಂಗಮರಿಂದ ಅಖಿಲ ಭಾರತದಲ್ಲಿ ಅದರ ಪ್ರಸಾರ ಕಾರ್ಯ ಮಾಡಬೇಕಾಗಿದೆ.

**ಗುರುಸಿದ್ಧೇಶ್ವರರು:**–ಅಪ್ಪಣೆ, ತಮ್ಮ ಮಹಾದಾಜ್ಞೆಯನ್ನು ತಪ್ಪದೇ ಪಾಲಿಸುತ್ತೇನೆ; ತಾವು ಯಾವ ತರದಲ್ಲೂ ಸಂಕೋಚಪಟ್ಟುಕೊಳ್ಳ

ಬಾರದು. ಈಗಾಗಲೇ ತಾವು ಬಹಳವಾಗಿ ನೊಂದಿರುವಿರಿ, ಬಳಲಿರುವಿರಿ, ತಮಗೆ ಈಗ ವಿಶ್ರಾಂತಿ ಅವಶ್ಯ.

**ಚೆನ್ನಬಸವಣ್ಣನವರು:**-ಸತ್ಯ, ಸತ್ಯ, ತಾವು ಸರ್ವಜ್ಞರು ನನ್ನ ಅಂತರಂಗವನ್ನು ಚೆನ್ನಾಗಿ ಅರಿತು ನುಡಿದಿರಿ, ನಿಜವಾಗಲೂ ನನಗೆ ಈಗ ವಿಶ್ರಾಂತಿ ಅವಶ್ಯವಾಗಿದೆ, ಅದರಲ್ಲೂ ದೀರ್ಘ ವಿಶ್ರಾಂತಿಯು ಅವಶ್ಯವಿದೆ. ತಮ್ಮ ಹಾಗೂ ಎಲ್ಲ ಶರಣ-ಜಂಗಮರ ಅಪ್ಪಣೆಪಡೆದು ದೀರ್ಘವಿಶ್ರಾಂತಿಗಾಗಿ ನಾನು ಸಹ್ಯಾದ್ರಿ ಪರ್ವತಗಳ ತಪ್ಪಲಲ್ಲಿರುವ ಅರಣ್ಯ ಪ್ರದೇಶಕ್ಕೆ ಪ್ರಯಾಣ ಬೆಳೆಸಬೇಕಾಗಿದೆ. ಆದುದರಿಂದ ನನ್ನ ಸಂಗಡವಿರುವ ಈ ಸಮಸ್ತ ಶರಣರ, ಮೂರುಸಾವಿರ ವಿರಕ್ತರ ಯೋಗಕ್ಷೇಮವನ್ನು ತಮ್ಮ ಪಾಲಿಗೆ ಬಿಟ್ಟಿದ್ದೇವೆ.ಅಲ್ಲದೆ ನಾವುಬೆನ್ನಿಗೆ ಕಟ್ಟಿಕೊಂಡು ತಂದಿರುವ ಈ ವಚನ ಸಾಹಿತ್ಯಗಳ ತಾಡೋಲೆಗಳನ್ನು ಸಹಾ ತಮಗೆ ಅರ್ಪಿಸಿದ್ದೇವೆ. ಇವುಗಳ ಸಂರಕ್ಷಣಾ ಭಾರವೂ ತಮ್ಮ ಪಾಲಿಗೇ ಸೇರಿದ್ದು ಇದರಂತೆ ಬೇರೆ ಬೇರೆ ಕಡೆಗಳಲ್ಲಿಯೂ ಸಹ ಕೆಲವು ಮಠಗಳಲ್ಲಿ, ಕೆಲವು ವಚನ ಸಾಹಿತ್ಯಗಳ ತಾಡೋಲೆಗಳನ್ನುಸಂರಕ್ಷಣೆ ಮಾಡಲು ಅಲ್ಲಿಯ ಮಠಾಧೀಶರಿಗೆ ಒಪ್ಪಿಸಿ ಬಂದಿದ್ದೇವೆ. ಈಗ ಉಳಿದಿರುವ ಮಹತ್ವವಾದ, ಅಮೂಲ್ಯವಾದ, ವಚನಸಾಹಿತ್ಯಗಳನ್ನು ತಮಗೆ ಅರ್ಪಿಸಿದ್ದೇವೆ. ಇನ್ನು ನಾನು ನಿಶ್ಚಿಂತನಾದೆ. ಶರಣರ ಹಾಗೂ ವಿರಕ್ತರ ಸಂರಕ್ಷಣೆ ಹಾಗೂ ವಚನ ಸಾಹಿತ್ಯಗಳ ಸಂರಕ್ಷಣೆ ಈ ಎರಡು ಮಹತ್ಕಾರ್ಯಗಳ ಸಲುವಾಗಿ ನಾವು ಕಲ್ಯಾಣದಿಂದ ದಿಕ್ಕೆಟ್ಟು ದಿಕ್ಕುಪಾಲಾಗಿ ಬಂದಿದ್ದೇವೆ (ಬರಬೇಕಾಯಿತು). ಈ ಮಹತ್ಕಾರ್ಯಕ್ಕಾಗಿ, ಈ ಮಧ್ಯೆ ಕಲ್ಯಾಣದಿಂದ ನಮ್ಮ ಬೆಂಬಲಿಗರಾಗಿ ಬಂದ ನಮ್ಮ ಅನೇಕ ಶರಣ-ಶರಣೆಯರು ಬಿಜ್ಜಳನ ಸೈನ್ಯದೊಡನೆ ಹೋರಾಡಿ ಪ್ರಾಣಾರ್ಪಣೆಮಾಡಿದ್ದಾರೆ. ಅವರೆಲ್ಲರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲಿ, ಶರಣಧರ್ಮಕ್ಕೆ ಜಯವಾಗಲಿ ಎಂದು ಹೇಳುತ್ತಿರುವಾಗ ಚೆನ್ನಬವಸಣ ನವರ ಕಂಠ ಬಿಗಿದು, ಬಾಯಿಂದ ಮಾತುಗಳು ಹೊರಡದಂತಾದುವು. ತಮ್ಮ ಕಣ್ಣುಮುಂದೇ ಸಹಸ್ರಾರು ಶರಣ-ಶರಣಿಯರು ಪ್ರಾಣಾರ್ಪಣೆ ಮಾಡಿದ್ದನ್ನೂ, ರಕ್ತದ ಕಾವಲಿ ಹರಿದದ್ದನ್ನೂ ಸ್ಮರಿಸಿಕೊಂಡು, ಆ ದೃಶ್ಯವು ಕಣ್ಣು ಮುಂದೆ ಕಟ್ಟಿದಂತಾಗಿ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯಿತು.

ಚೆನ್ನಬಸವಣ್ಣನವರ, ಗಂಭೀರವಾಣಿಯನ್ನೂ, ಹುತಾತ್ಮರಾದ ಶರಣ ಶರಣೆಯರ, ದಾರುಣ ಕಥೆಯನ್ನೂ ಕೇಳುತ್ತಿದ್ದ ಸಮಸ್ತ ವಿರಕ್ತರ, ಶರಣರ ಕಣ್ಣುಗಳಲ್ಲಿ ನೀರು ತಾನಾಗಿ ಹರಿದುವು; ಎಲ್ಲರ ಗಂಟಲುಗಳೊಣಗಿದವು. ಕೆಲವರಂತೂ ದುಃಖವನ್ನು ತಾಳಲಾರದೆ ಬಿಕ್ಕಿ ಬಿಕ್ಕಿ ಅತ್ತುಬಿಟ್ಟರು. ಲಕ್ಷಾಂತರ ಶರಣಿ ಹೆಣ್ಣುಮಕ್ಕಳು ಪ್ರಾಣಾರ್ಪಣೆಮಾಡಿದ ಸುದ್ದಿಯನ್ನು ಕೇಳಿ ಗುರುಸಿದ್ಧೇಶ್ವರ ಮಹಾಸ್ವಾಮಿಗಳವರಿಗೂ ದುಃಖ ತಡೆಯದಂತಾಯಿತು, ಆದರೂ ಪ್ರಯಾಸದಿಂದ ದುಃಖವನ್ನು ತಡೆಮಕೊಂಡು ಚೆನ್ನಬಸವಣ್ಣನವರಲ್ಲಿ ಅರಿಕೆ ಮಾಡಿಕೊಂಡರು.

**ಗುರುಸಿದ್ಧೇಶ್ವರರು:—**ಚಿಕ್ಕದಣ್ಣಾಯಕರೇ! ಎಲ್ಲ ಶ್ರೀ ಶಿವನಿಚ್ಛೆ, ಶರಣ ಧರ್ಮವನ್ನು ನಾಶಗೊಳಿಸಲು ಯಾರಿಂದಲೂ ಸಾಧ್ಯವಿಲ್ಲ. ಸದ್ಯದ ಪರಿಸ್ಥಿತಿಯಲ್ಲಿ ತಾವು ಬಹಳವಾಗಿ ಬಳಲಿ ಬೆಂಡಾಗಿರುವಿರಿ. ಕೆಲವು ದಿವಸಗಳು ಏಕಾಂತದಲ್ಲಿದ್ದು ಅನುಷ್ಠಾನಗೈದರೆ ಒಳ್ಳೆಯದು, ಉಳಿದ ಕಾರ್ಯಗಳನ್ನು ತಮ್ಮ ಅಪ್ಪಣೆಯಂತೆ ನಾವು ನೋಡಿಕೊಳ್ಳುತ್ತೇವೆ. ಮೊದಲು ತಮ್ಮ ಅಮೃತ ಹಸ್ತದಿಂದ ಶರಣ ಧರ್ಮದ ಕೇಂದ್ರಸ್ಥಾನದ ಕುರುಹಾಗಿ ಶಿವಾನುಭವ ಮಂಟಪವು ಸ್ಥಾಪಿತವಾಗಲಿ.

**ಚೆನ್ನಬಸವಣ್ಣನವರು:—**ಗುರುಸಿದ್ಧೇಶ್ವರರೇ! ಇನ್ನೂ ನಾಲ್ಕಾರು ದಿನಗಳು ಗತಿಸಲಿ, ವಯೋವೃದ್ಧರಾದ ಮಡಿವಾಳ ಮಾಚಿದೇವರು ಸಹ್ಯಾದ್ರಿಯ ತಪ್ಪಲಲ್ಲಿರುವ ಘೋರಾರಣ್ಯದೊಳಿರುವ, ಮಹಾಮನೆಯನ್ನು ಶೋಧಿಸಲು ಕಿನ್ನರಿ ಬ್ರಹ್ಮಯ್ಯನವರ ಸಂಗಡ ಹೋಗಿದ್ದಾರೆ. ಅವರ ಶೋಧನೆಯ ಕಾರ್ಯ ಮುಗಿದೊಡನೆ ಇಲ್ಲಿಗೆ ಬರಲು ಹೇಳಿದ್ದೇನೆ. ಇಷ್ಟರಲ್ಲೇ ಅವರು ಬಂದುಬಿಡುತ್ತಾರೆ, ಅವರ ನೇತೃತ್ವದಲ್ಲಿ ಆಗಬೇಕಾಗಿದೆ.

**ಗುರುಸಿದ್ಧೇಶ್ವರರು:—**ಏನು ಮಾಚಿದೇವರೇ, ಪರಮ ಸಂತೋಷವಾಯಿತು. ಅವರೂ ಬಂದುಬಿಟ್ಟರೆ ಕಬ್ಬಿಗೆ ಜೇನಿಟ್ಟಂತಾಗುತ್ತದೆ ಎಂದು ಹೇಳುತ್ತಿರುವಷ್ಟರಲ್ಲಿ ಮಾಚಿದೇವರು ದಯಮಾಡಿಸುತ್ತಿದ್ದಾರೆ ಎಂಬ ಶುಭ ವಾರ್ತೆ ಬಂದಿತು. ಆದರೆ ಮಡಿವಾಳ ಮಾಚಿದೇವರು, ಬಂದ ನಂತರ ಶುಭ ವಾರ್ತೆಯ ಸಂಗಡ ವಿಷಾದ ವಾರ್ತೆಯನ್ನೂ ತಂದಿದ್ದರು.

ಮಾಚಿದೇವರು ಬಂದು, ಚೆನ್ನಬಸವಣ್ಣನವರ ಪಾದಪದ್ಮಂಗಳಲ್ಲಿ ಮಣಿದು ಮಹಾಮನೆಯ ಶೋಧನೆಯ ಕಾರ್ಯದ ಮಾರ್ಗದಲ್ಲಿ ಒಂದು ಮಹಾ ಸಾಹಸವನ್ನು ಗೈದು ಕಿನ್ನರಿ ಬ್ರಹ್ಮಯ್ಯನವರು ಲಿಂಗೈಕ್ಯರಾದರು (ಎಂದು ಅರಿಕೆ ಮಾಡಿಕೊಂಡರು). ಕಿನ್ನರಿಬ್ರಹ್ಮಯ್ಯ ಶರಣರು, ಲಿಂಗೈಕ್ಯರಾದ ಸುದ್ದಿ ಕೇಳಿ ಚೆನ್ನಬಸವಣ್ಣನವರು ಕೆಲವು ನಿಮಿಷ ಮೌನತಾಳಿದರು. ಕೆಲವು ನಿಮಿಷಗಳ ನಂತರ, ಚೆನ್ನಬಸವಣ್ಣನವರು ಮಾಚಿದೇವರಿಗೆ ಮಹಾಮನೆಯು ಶೋಧವಾಯಿತೇ ?

**ಮಾಚಿದೇವರು:**—ಆ ಕಾರ್ಯವನ್ನು ಸಾಧಿಸದೆ ಮರಳಿ ಬರುವೆನೆ? ನಾನು, ಶೋಧಿಸಿದ್ದಾಯಿತು. ಆದರೆ ಮಾರ್ಗ ಮಾತ್ರ ಬಹು ದುರ್ಗಮವಾಗಿದೆ. ಸಾಮಾನ್ಯರಿಗಂತೂ ಅಲ್ಲಿ ಹೆಜ್ಜೆಯಿಡಲೂ ಸಾಧ್ಯವಿಲ್ಲ. ಆಶೆ-ಆಮಿಷಗಳನ್ನೆಲ್ಲಾ ಅಳಿದ ಪರಮ ವಿರಕ್ತರಿಗಲ್ಲದೆ, ಆ ಪ್ರದೇಶವು ಉಳಿದವರಿಗೆ ಅಸಾಧ್ಯವೂ, ಅಲಭ್ಯವೂ ಆಗಿದೆ. ಆದರೂ ಒಳ್ಳೆಯ ಪವಿತ್ರವಾದ ಸ್ಥಳ, ಸಹ್ಯಾದ್ರಿಯ ಉನ್ನತವಾದ ಶಿಖರಗಳ ದಂಡೆಯಲ್ಲಿ ನಿಸರ್ಗ ಸೌಂದರ್ಯದಿಂದೊಡಗೂಡಿ, ಕಣ್ಮನಗಳಿಂದಾನಂದವನ್ನುಂಟು ಮಾಡುವಂಥಹ ರಮ್ಯ ಸ್ಥಳವಾಗಿದೆ, ಹೀಗೆ ಅರಿಕೆ ಮಾಡಿಕೊಂಡರು.

**ಚೆನ್ನಬಸವಣ್ಣನವರು:**—ಮಾಚಿದೇವರೇ ! ಇಗೋ ಇವರೇ ನಮ್ಮ ಅಲ್ಲಮಪ್ರಭುದೇವರು ತಿಳಿಸಿದ ಗುರುಸಿದ್ಧೇಶ್ವರರು, ಇವರು ಮಹಾಮಹಿಮಾ ಪುರುಷರು, ಮಹಾ ತಪಸ್ವಿಗಳು, ಮಹಾ ಶಿವಾನುಭವಿಗಳು, ಶಾಪಾನುಗ್ರಹ ಶಕ್ತಿಯುಳ್ಳವರು ಹಾಗೂ ಈಗ ಸಧ್ಯಕ್ಕೆ ದಿಕ್ಕೆಟ್ಟು ಬಂದಿರುವ ನಮ್ಮೆಲ್ಲರಿಗೆ ಇವರು ಮಾತೃಸ್ವರೂಪರಾಗಿದ್ದಾರೆ. ಅವರ ರಕ್ಷಣೆಯಲ್ಲಿ ನಾವೆಲ್ಲಾ ನೆಮ್ಮದಿಯಾಗಿದ್ದೇವೆ. ಈಗಾಗಲೇ ನಮ್ಮ ಶರಣ-ವಿರಕ್ತರನ್ನೂ, ವಚನ ಸಾಹಿತ್ಯಗಳನ್ನೂ ಅವರಿಗೆ ಅರ್ಪಿಸಿಬಿಟ್ಟಿದ್ದೇವೆ. ಅವರೆಲ್ಲರ ಯೋಗಕ್ಷೇಮ ಇವರ ಪಾಲಿಗೇ ಬಿಟ್ಟುಬಿಟ್ಟಿದ್ದೇವೆ. ಇನ್ನು ನಾವು ನಮ್ಮ ಮುಂದಿನ ವಿಚಾರ ಮಾಡಬೇಕಾಗಿದೆ, ನಿಮ್ಮ ಬರುವಿಗಾಗಿ ಕಾದು ಕುಳಿತಿದ್ದೆವೆ, ಇನ್ನು ತಾಮಸ ಬೇಡ, ಆದಷ್ಟು ಶೀಘ್ರವಾಗಿ ನಮ್ಮ ಕರ್ತವ್ಯವನ್ನು ಮುಗಿಸಿಬಿಡೋಣ.

**ಮಾಚಿದೇವರು:**—ತಮ್ಮ ಅಪ್ಪಣೆಯಂತೆ ಆಗಲಿ, ನಿಮಗಿಂತಲೂ ನನಗೆ ಆತುರವಾಗಿದೆ. ನಿಮ್ಮಂತೆ ನನ್ನ ಕರ್ತವ್ಯವೂ ಇಲ್ಲಿಗೆ ಮುಗಿಯಿತು. ಅಲ್ಲಮಪ್ರಭುದೇವರ ಮುಂದೆ ಮಾಡಿದ ನಿಮ್ಮ ಪ್ರತಿಜ್ಞೆಯೂ ಕೈಗೂಡಿ ಯಶಸ್ವಿಯಾಯಿತು, ನನ್ನ ಪ್ರತಿಜ್ಞೆಯೂ ಈಡೇರಿತು, ಅಂಪ ಮೇಲೆ ನನ್ನ ದಾದರೂ ಉಳಿದಿರುವುದೇನು ನನಗೂ ಅಪ್ಪಣೆಯಾದರೆ ಒಳ್ಳೆಯದು, ನಿರೂಪ ಕೊಡಿರಿ ಬುದ್ಧಿ ಎಂದು ಪ್ರಾರ್ಥಿಸಿದರು.

**ಚೆನ್ನಬಸವಣ್ಣನವರು:**—ಮಾಚಿದೇವರೆ, ತಾವಂದಂತೆ ನಮ್ಮೀರ್ವರ ಪ್ರತಿಜ್ಞೆಗಳು ಕಾರ್ಯರೂಪಕ್ಕೆ ಬಂದಹಾಗಾಯಿತು, ಆದರೂ ಇನ್ನೊಂದು ಮುಖ್ಯವಾದ ಮಹತ್ಕಾರ್ಯವೊಂದುಳಿದಿದೆ ಅದೊಂದನ್ನು ಕಾರ್ಯರೂಪಕ್ಕೆ ತಂದ ನಂತರ, ನಿಮ್ಮಿಚ್ಛೆಯಂತೆ ಹಿಪ್ಪರಗಿ ನಮ್ಮ ಸಂಕಲ್ಪದಂತೆ, ಉಳಿವೆ ಮಹಾಮನೆ.

**ಮಾಚಿದೇವರು:**—ಮತ್ಯಾವ ಮಹತ್ಕಾರ್ಯ ಉಳಿದಿದೆ ?

**ಚೆನ್ನಬಸವಣ್ಣನವರು:**—ಈ ಪೂಬಳ್ಳಿ ಪುಣ್ಯಕ್ಷೇತ್ರವನ್ನು ಎರಡನೆಯ ಶರಣ ಧರ್ಮದ ಕೇಂದ್ರವನ್ನಾಗಿಸಿ, ಇಲ್ಲಿ ಶಿವಾನುಭವಮಂಟಪವನ್ನು ಸಂಸ್ಥಾಪಿಸಿ ನಮ್ಮ ಗುರುಸಿದ್ಧೇಶ್ವರರನ್ನೇ ಅಧ್ಯಕ್ಷರನ್ನಾಗಿ, ಸರ್ವಾನುಮತದಿಂದ ನಿಶ್ಚಯಿಸಿ, ಮತ್ತೊಮ್ಮೆ ಕಲ್ಯಾಣವನ್ನು ಕಣ್ಣಾರೆ ಕಂಡು ಆನಂದಿಸಿ ನಂತರ ನಮ್ಮ ನಿಮ್ಮ ಕರ್ತವ್ಯ.

**ಮಾಚಿದೇವರು:**—ಬಹಳ ಸಂತೋಷ, ಅವಶ್ಯವಾಗಿ ಆಗಲಿ.

**ಗುರುಸಿದ್ಧೇಶ್ವರರು:**—ನಿಮ್ಮಿಬ್ಬರ ಪ್ರತಿಜ್ಞೆ ಈಡೇರಿತು; ನಿಮ್ಮ-ನಿಮ್ಮ ಅವತಾರ ಕಾರ್ಯಗಳನ್ನು ಮುಗಿಸಿ ದೀರ್ಘವಿಶ್ರಾಂತಿಗಾಗಿ ಹಾತೊ-ರೆಯುತ್ತಿರುವುದು ಸಹಜವೇ, ಆದರೆ ನನ್ನದಾದರೂ ಉಳಿದಿರುವುದೇನು? ತಮ್ಮಂತೆ ಅಲ್ಲಮಪ್ರಭುದೇವರು ನನಗೆ ವಹಿಸಿಕೊಟ್ಟಿದ್ದ ಜವಾಬ್ದಾರಿಯೂ ಮುಗಿಯಿತು. ನನ್ನ ಕರ್ತವ್ಯವನ್ನೂ ನಾನು ಮುಗಿಸಿದ ಮೇಲೆ ಇನ್ನು ನಾನು ನನ್ನ ಅವತಾರ ಕಾರ್ಯವನ್ನೂ ಮುಗಿಸಿದಂತೆಯೇ.

**ಚೆನ್ನಬಸವಣ್ಣನವರು:**—ಹಾಗಲ್ಲ ಶಿವಯೋಗಿಗಳೇ, ಪೂಬಳ್ಳಿಯಲ್ಲಿ ವೀರಶೈವ ಧರ್ಮದ ಕೇಂದ್ರವನ್ನು ಸಂಸ್ಥಾಪಿಸಿ ಕೆಲವು ಕಾಲ ಧರ್ಮಜಾಗ್ರತಿ ಕಾರ್ಯವನ್ನು ಕೈಕೊಂಡು ಕೇಂಧ್ರವು ಸುಸ್ಥಿರವಾಗಿ ನೆಲೆಗೊಂಡನಂತರ ತಾವು ತಮ್ಮ ಅವತಾರ ಕಾರ್ಯವನ್ನು ಮುಗಿಸಬಹುದಲ್ಲಾ.

**ಗುರುಸಿದ್ಧೇಶ್ವರರು:**– ಕ್ಷಮಿಸಬೇಕು, ಇನ್ನು ಮುಂದಿನ ಯಾವತ್ತೂ ಚಟುವಟಿಕೆಗಳೂ ತಮ್ಮ ಅನುಯಾಯಿಗಳೂ, ನನ್ನ ಪ್ರೇಮ ಪಾತ್ರರೂ ಆದ ಮೂರುಸಾವಿರ ವಿರಕ್ತರ ಪಾಲಿಗೆ ಸೇರಿದ್ದು, ಆದ್ದರಿಂದ ವೀರಶೈವ ಧರ್ಮದ ಕೇಂದ್ರ ಸಂಸ್ಥಾಪನೆಯ ಶುಭ ದಿನವಂದೇ ಮೂರುಸಾವಿರ ವಿರಕ್ತರ ತಂಡದ ನಾಯಕರಿಗೆ ಕೇಂದ್ರದ ಅಧ್ಯಕ್ಷ ಸ್ಥಾನವನ್ನು ವಹಿಸಿಕೊಡಬೇಕೆಂದು ನನ್ನ ಪ್ರಾರ್ಥನೆ.

**ಚೆನ್ನಬಸವಣ್ಣನವರು:**—ಒಳ್ಳೆಯದು ಶಿವನಿಚ್ಛೆ ಆದರೆ ತಾವು ಮಾಡತಕ್ಕ ಮುಖ್ಯವಾದ ಇನ್ನೊಂದು ಮಹತ್ವವಾದ ಕಾರ್ಯವಿದೆ ಅದೊಂದು ಮುಗಿಸಿದರೆ ಮುಂದೆ ತಮ್ಮ ಇಚ್ಛೆಯಂತಾಗಲಿ.

**ಗುರುಸಿದ್ಧೇಶ್ವರರು:**—ಮತ್ತೂ ಮಾಡುವ ಕಾರ್ಯ ಉಳಿದಿದೆಯೇ ? ಅದೇನೋ ಅಪ್ಪಣೆಯಾಗಲಿ.

**ಚೆನ್ನಬಸವಣ್ಣನವರು:**—ಕಲ್ಯಾಣದ ಕ್ರಾಂತಿಯಾದ ನಂತರ ಕಲ್ಯಾಣದ ತರುವಾಯ ಮತ್ತೆ ಶರಣ ಧರ್ಮದ ಕೇಂದ್ರವಾಗಿರುವ ಈ ಪವಿತ್ರ ಭೂಮಿಯು ಮಹಾಕ್ಷೇತ್ರವಾಗಬೇಕು. ಇದೇ ಪುಣ್ಯಭೂಮಿಯಲ್ಲಿ ಶರಣ ಧರ್ಮದ (ವೀರಶೈವ ಧರ್ಮದ) ನಿರಂಜನ ಪೀಠವನ್ನು ಸ್ಥಾಪಿಸಿ ಈ ಪೀಠದಿಂದಲೇ ಧರ್ಮಪ್ರಚಾರ ನಡೆಯುವಂತೆ ಮಾಡಿ ತಾವು ಅವತಾರ ಕಾರ್ಯವನ್ನು ಮುಗಿಸಬಹುದು.

**ಗುರುಸಿದ್ಧೇಶ್ವರರು:**—ಒಡೆಯರ ಅಪ್ಪಣೆಯಂತೆ ಆಗಲಿ ಆದರೆ ಈ ಪೀಠಕ್ಕೆ ಈ ಮಠಕ್ಕೆ ತಾವೇ ನಾಮಕರಣ ಮಾಡಬೇಕಾಗಿ ಪ್ರಾರ್ಥನೆ.

**ಚೆನ್ನಬಸವಣ್ಣನವರು:**—ನಾಮಕರಣವೇ ? ಆಶ್ಚರ್ಯ ಮತ್ತೇಕೆ ಹೊಸನಾಮಕರಣ ಗುರುಸಿದ್ಧೇಶ್ವರಮಠ ಎಂದೇ ಆಗಲಿ ಪೂಬಳ್ಳಿಯಲ್ಲಿ ಶರಣ ಧರ್ಮದ ಧ್ವಜವನ್ನು ಹಾರಿಸಿದ ಮಹಾತ್ಮರಾದ ನಿಮ್ಮ ಪವಿತ್ರ ನಾಮವು

ಅಚ್ಚಳಿಯದೆ ವೀರಶೈವ ಧರ್ಮದ ಹಿರಿಮೆಯು (ಗುರುತಾಗಿ) ಕುರುಹಾಗಿ ಉಳಿಯಲಿ.

**ಗುರುಸಿದ್ಧೇಶ್ವರರು:**—ಒಡೆಯರು ಕ್ಷಮಿಸಬೇಕು- ನನ್ನ ಹೆಸರಿಡು-ವುದರಲ್ಲಿ ಅರ್ಥವೇನಿದೆ? ನಾನು ಕೇವಲ ಆಜ್ಞಾಧಾರಕನು, ಶರಣ ಧರ್ಮದ ಸೇವಕನು, ಪ್ರಭುದೇವರ, ಬಸವಣ್ಣನವರ, ಹಾಗೂ ತಮ್ಮ ಆಜ್ಞೆಯಂತೆ ನಾನು ಮಾಡಬೇಕಾಗಿದ್ದ ಕರ್ತವ್ಯವನ್ನು ಮಾಡಿದ್ದೇನೆ, ನಾನೆಷ್ಟರವನು ? ನನ್ನ ಸೇವೆ ಎಷ್ಟರದು? ನಿಜವಾಗಲೂ ಅವಿಶ್ರಾಂತವಾಗಿ ದುಡಿದು ದುಡಿದು ನಾಡಿನಾದ್ಯಂತ ಸಂಚರಿಸಿ ವೀರಶೈವ ಧರ್ಮಪ್ರಚಾರಗೈದವರು ತಮ್ಮ ಕಲ್ಯಾಣದ ಅನುಭವ ಮಂಟಪದ ಗರಡಿಯಲ್ಲಿ ಪಳಗಿದ, ತಮ್ಮ ಅನುಯಾಯಿಗಳೂ,ಪ್ರಭುದೇವರ ಹಾಗು ಬಸವೇಶ್ವರರಪ್ರೀತಿಪಾತ್ರರೂ ಆ ಮೂರುಸಾವಿರ ವಿರಕ್ತರು. ಅವರ ಮಹಿಮೆ ತಿಳಿಯುವಂತೆ ಅವರ ಹೆಸರು ಆಚಂದ್ರಾರ್ಕವಾಗಿ ಅಮರವಾಗಿ ಉಳಿದಿರುವಂತೆ ಮೂರುಸಾವಿರ ವಿರಕ್ತರ ಕುರುಹಾಗಿ, ಅವರ ಹೆಸರನ್ನೇ ಇಡುವುದು, ಸಮಂಜಸವೂ, ಸೂಕ್ತವೂ, ಯಥಾರ್ಥವೂ ಆಗಿದೆ.

**ಚೆನ್ನಬಸವಣ್ಣನವರು:**—ಆಗಬಹುದು ತಮ್ಮ ಅಭಿಪ್ರಾಯದಂತೆ ಈ ಪೀಠಕ್ಕೆ ಮೂರುಸಾವಿರ ವಿರಕ್ತರ ಮಠವೆಂದೇ ಇರಲಿ. ಆದರೆ ಹಲವಾರು ವರ್ಷಗಳು ತಮ್ಮ ತಪೋಭೂಮಿಯಾಗಿ, ಪವಿತ್ರವಾಗಿರುವ ಈ ಆಶ್ರಮಕ್ಕೆ ತಾವೇ ಮೂಲಕರ್ತೃಗಳಾಗಿರುವುದರಿಂದ ಮೂರುಸಾವಿರ ಗುರುಸಿದ್ಧೇಶ್ವರ ಮಠ ಎಂದು ಹೆಸರಾಗಲಿ.

**ಗುರುಸಿದ್ಧೇಶ್ವರರು:**—ತಮ್ಮ ಅಪ್ಪಣೆಯಂತಾಗಲಿ ಎಂದರು. ಚೆನ್ನಬಸವಣ್ಣನವರ ಅಪ್ಪಣೆಯಂತೆ ಶಿವಾನುಭವ ಮಂಟಪವು ಸ್ಥಾಪನೆಯಾಯಿತು. ಕಲ್ಯಾಣದ ಅನುಭವ ಮಂಟಪದಲ್ಲಿ ನುರಿತ ಅನೇಕ ಅನುಭಾವಿ-ಗಳಿಂದ ಚರ್ಚಾಗೋಷ್ಠಿ ಜರುಗಿ, ಕರ್ನಾಟಕದ ಹಾಗೂ ಹೊರನಾಡಿನ ಎಲ್ಲಾ ಭಾಗಗಳಲ್ಲಿ ಶಿವಾನುಭವದ ಶಿಬಿರಗಳನ್ನು ಸ್ಥಾಪಿಸಲು ಒಮ್ಮತದಿಂದ ನಿಶ್ಚಯಿಸಲಾಯಿತು.

ಪ್ರಭುದೇವರ ಅಪ್ಪಣೆಯಂತೆ ಮೂರುಸಾವಿರ ವಿರಕ್ತರನ್ನೂ ವಚನ ಸಾಹಿತ್ಯಗಳ ತಾಡೋಲೆಗಳನ್ನೂ ಪೂಬಳ್ಳಿಯ ಗುರುಸಿದ್ಧೇಶ್ವರರ, ರಕ್ಷಣೆ

ಯಲ್ಲಿ ಸುರಕ್ಷಿತಗೊಳಿಸಿ ಚೆನ್ನಬಸವಣ್ಣನವರು, ಗುರುಸಿದ್ಧೇಶ್ವರರ ಹಾಗೂ ಮೂರುಸಾವಿರ ವಿರಕ್ತರ, ಇನ್ನುಳಿದ ಹುಬ್ಬಳ್ಳಿಯ ಶರಣ ಶರಣೆಯರಿಂದ ಬೀಳ್ಕೊಂಡು ಕೆಲವು ಶರಣ ಜಂಗಮರೊಂದಿಗೆ ಉಳಿವೆ ಮಹಾಮನೆಗೆ ಪ್ರಯಾಣ ಬೆಳೆಸಿದರು. ಉಳಿವೆ ಮಹಾಮನೆಗೆ ಹೋಗುವ ಮಾರ್ಗದಲ್ಲಿ, ಅದರಗುಂಚಿ, ಅರಳೀಕಟ್ಟಿ ಮೊದಲಾದ ಗ್ರಾಮಗಳಲ್ಲಿ ಒಂದೊಂದು ದಿವಸ ತಂಗಿ, ಲಿಂಗಾರ್ಚನೆ ಅರ್ಪಿತಾದಿಗಳನ್ನು ತೀರಿಸಿಕೊಂಡು ಉಳಿವೆಯ ಮಹಾಮನೆಯನ್ನು ಸೇರಿದರು. ಅದರಗುಂಚಿ ಗ್ರಾಮದಲ್ಲಿ ಚೆನ್ನಬಸವಣ್ಣ-ನವರು ಲಿಂಗಾರ್ಚನೆಗೈದ ಸ್ಮರಣಾರ್ಥವಾಗಿ ಅಲ್ಲಿಯ ಭಕ್ತರು ಒಂದು ಮಠವನ್ನು ಕಟ್ಟಿಸಿದ್ದಾರೆ. ಅಂದಿನಿಂದ ಇಂದಿನ ವರೆಗೆ ಆ ಮಠವು ಹುಬ್ಬಳ್ಳಿಯ ಮೂರುಸಾವಿರಮಠದ ಶಾಖಾ ಮಠವಾಗಿ ಉಳಿದಿದೆ.

ಮಾಚಿದೇವರು ತಮ್ಮ ಸ್ಥಾನವಾದ ಹಿಪ್ಪರಿಗೆಗೆ ಪ್ರಯಾಣ ಬೆಳೆಸಿ ಹಿಪ್ಪರಿಗಿಯಲ್ಲೇ ಲಿಂಗದಲ್ಲಿ ಬೆರೆದರು.

ಇತ್ತ ಮೂರುಸಾವಿರ ವಿರಕ್ತರೆಲ್ಲರೂ, ಕರ್ತೃ ಗುರುಸಿದ್ಧೇಶ್ವರರೇ ಶೂನ್ಯಸಿಂಹಾಸನಾರೋಹಣ ಮಾಡಬೇಕೆಂದು ಬಹಳ ಒತ್ತಾಯಪಡಿಸಿದರು. ಆದರೂ ಕರ್ತೃ ಗುರುಸಿದ್ಧೇಶ್ವರರು, ಒಪ್ಪಲಿಲ್ಲ. ನೀವೆಲ್ಲಾ ಬಹಳ ಶ್ರಮ-ವಹಿಸಿ ಶರಣಧರ್ಮದ ಉದ್ಧಾರಗೈದಿರುವಿರಿ ಆದ್ದರಿಂದ, ನೀವೇ ಈ ಪೀಠಕ್ಕೆ ಯೋಗ್ಯರಾದವರು, ಇದು ಸಾಮಾನ್ಯ ಪೀಠವಲ್ಲ ಜ್ಞಾನನಿಧಿ ಚೆನ್ನಬಸವಣ್ಣ ನವರ ಅಪ್ಪಣೆಯ ಮೇರೆಗೆ ಸಂಸ್ಥಾಪಿಸಲ್ಪಟ್ಟಿದ್ದು. ಆದ್ದರಿಂದ. ಈ ಸಿಂಹಾ ಸನವು, ಜಗದ್ಗುರು ಶೂನ್ಯ ಸಿಂಹಾಸನವೇ ಸರಿ, ಎಂದಾಗ ಎಲ್ಲರ ಕಣ್ಣುಗ ಳಲ್ಲಿ ಆನಂದಾಶ್ರುಗಳುದುರಿದವು. ಆಗ ಮೂರುಸಾವಿರ ವಿರಕ್ತರೂ ಸಕಲ ಶರಣರೂ, ನಮ್ಮ ಪಾಲಿಗೆ ತಾವೇ ಜಗದ್ಗುರುಗಳು. ಜಗದ್ಗುರು ಗುರುಸಿದ್ಧೇ ಶ್ವರ ಮಹಾರಾಜರಿಗೆ ಜಯವಾಗಲಿ ಎಂಬ ಜಯಘೋಷವು ಗಗನಸ್ಪರ್ಶ-ವಾಯಿತು. ಕರ್ತೃ ಜಗದ್ಗುರು ಗುರುಸಿದ್ಧೇಶ್ವರರು, ಮೂರುಸಾವಿರ ವಿರಕ್ತ ಶರಣರಿಗೆ ಷಟ್‌ಸ್ಥಲ, ತತ್ತ್ವಬೋಧೆಯನ್ನು, ವೀರಶೈವ ಧರ್ಮದ ತಿರು ಳನ್ನು ತಮ್ಮ ಅನುಭವದೊಡನೆ, ವಿವರ ವಿವರವಾಗಿ ತಿಳಿಸಿ ಹೇಳಿದರು. ಜಗದ್ಗುರು ಗುರುಸಿದ್ಧೇಶ್ವರನೇ ಅವರೆಲ್ಲರಿಗೆ ಪೀಠದ ಒಡೆಯನಾಗಿ ರಾರಾಜಿ-ಸಹತ್ತಿದನು.

ಅಂತೂ ಪೂಬಳ್ಳಿಯ ವೀರಶೈವ ಧರ್ಮದ ಕೇಂದ್ರಕ್ಕೆ ಮೂರುಸಾವಿರದ ಗುರುಸಿದ್ಧೇಶ್ವರಮಠ ಎಂದು ಹೆಸರಾಯಿತು. ಕೆಲವು ವರ್ಷಗಳು ಗತಿಸಿದ ನಂತರ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರರ ಹಾಗೂ ಚೆನ್ನಬಸವಣ್ಣ-ನವರ ಅಪ್ಪಣೆಯಂತೆ, ಮೂರುಸಾವಿರ ವಿರಕ್ತರ ತಂಡದ ನಾಯಕರಲ್ಲೊಬ್ಬರಾದ ಮೂರುಸಾವಿರದಪ್ಪನವರಿಗೆ ನಿರಾಭಾರೀ ಚರಪಟ್ಟಾಧಿಕಾರವನ್ನು ನಡೆಸಲು ಎಲ್ಲ ಸಿದ್ಧತೆಗಳೂ ನಡೆದವು. ನಾಡಿನ ಹಾಗೂ ಹೊರನಾಡಿನ ಪ್ರತಿಷ್ಠಿತ ವೀರಶೈವ ಕಾರ್ಯಕರ್ತರುಗಳನ್ನೂ ಹರಗುರು ಚರಮೂರ್ತಿ-ಗಳನ್ನೂ, ಅಸಂಖ್ಯಾತ ಶರಣ-ಶರಣೆಯರನ್ನೂ ಆಹ್ವಾನಿಸಲಾಯಿತು. ಪೂಬಳ್ಳಿಯ ಭಕ್ತರು ಹಗಲಿರುಳೂ ಅವಿಶ್ರಾಂತವಾಗಿ ದುಡಿದು ಯಾವ ಕೊರತೆಯೂ ಬಾರದಂತೆ ಎಲ್ಲಾ ರೀತಿಯಿಂದಲೂ, ಸಿದ್ಧತೆಗಳನ್ನೂ ಮುಂಜಾಗ್ರತೆಯಿಂದ ಮಾಡಿಕೊಂಡರು. ಓಣಿ-ಓಣಿಗಳನ್ನು, ಬೀದಿ-ಬೀದಿಗಳನ್ನು ತಳಿರು ತೋರಣಗಳಿಂದಲೂ, ಬಾಳೆಯ ಕಂಬಗಳಿಂದಲೂ, ಚಿತ್ರವಿಚಿತ್ರವಾಗಿ ಅಲಂಕರಿಸಿದರು. ನಾನಾ ತರದ ಮಂಗಲ ವಾದ್ಯಗಳು ಭೋರ್ಗರೆದವು ಇಂತಹ ಸಂತೋಷ ಸಮಯದ ವಾತಾವರಣದಲ್ಲಿ ಕರ್ತೃ ಜಗದ್ಗುರು ಗುರುಸಿದ್ಧೇಶ್ವರರು ಶುಭಯೋಗದಲ್ಲಿ ಮೂರುಸಾವಿರದಪ್ಪನವರಿಗೆ ವಿಧಾ-ನೋಕ್ತವಾಗಿ ಷಟ್‌ಸ್ಥಲ ಬ್ರಹ್ಮೋಪದೇಶ ಮಾಡಿದರು. ಸಕಲ ಹರ, ಗುರು, ಹರಮೂರ್ತಿಗಳ ಕೋರಿಕೆಯ ಮೇರೆಗೆ. ಶ್ರೀ ಮೂರುಸಾವಿರದಪ್ಪನವರು ಜಗದ್ಗುರು ಸಿಂಹಾಸನವನ್ನು ಆರೋಹಣ ಮಾಡಿದರು; ಹಾಗೂ ಕರ್ತೃ ಜಗದ್ಗುರು ಗುರುಸಿದ್ಧೇಶ್ವರರ ಅಪ್ಪಣೆಯಂತೆ, ಜಗದ್ಗುರು ಮೂರುಸಾವಿರೇಶ ರಾಜಯೋಗೀಂದ್ರ ನಾಮದಿಂದ ಜಯಘೋಷಗಳಾದವು. ನಿರಾಭಾರಿ ಚರ ಪಟ್ಟಾಧಿಕಾರ ಮಹೋತ್ಸವವು ವಿಜೃಂಭಣೆಯಿಂದ, ಶಾಸ್ತ್ರೋಕ್ತವಾಗಿಯೂ ವಿಧಾನೋಕ್ತವಾಗಿಯೂ ನೆರವೇರಿತು.

ಅಂತೂ ಮೂರುಸಾವಿರ ವಿರಕ್ತರ ತಂಡದ ನಾಯಕರಾದ ಮೂರು ಸಾವಿರದಪ್ಪನವರು, ಜಗದ್ಗುರು ಮೂರುಸಾವಿರೇಶ ರಾಜಯೋಗೀಂದ್ರ-ರಾದರು.

ಲಿಂಗವೆನ್ನೆ ಲಿಂಗೈಕ್ಯವೆನ್ನೆ ಸಂಗವೆನ್ನೆ ಸಮರಸವೆನ್ನೆ
ಆಯಿತೆನ್ನೆ ಆಗದೆನ್ನೆ ನಾನೆನ್ನೆ ನೀನೆನ್ನೆ
ಚೆನ್ನಮಲ್ಲಿಕಾರ್ಜುನನಲ್ಲಿ ಬೆರೆತ ಬಳಿಕ ಏನೂ ಆನ್ನೆ

ಪೂಬಳ್ಳಿಯಲ್ಲಿ ಶಿವಾನುಭವದ ಮಂಟಪದ ಸ್ಥಾಪನೆಯಾಗಿ ಶ್ರೀ ಮಜ್ಜಗದ್ಗುರು ಮೂರುಸಾವಿರೇಶ ರಾಜಯೋಗೀಂದ್ರ ಮಹಾಸ್ವಾಮಿಗಳವರು ಶೂನ್ಯ ಸಿಂಹಾಸನಾರೋಹಣ ಮಾಡಿದ ನಂತರ ಅವರ ಗುರುಗಳಾದ ಜಗದ್ಗುರು ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಮಹಾಸನ್ನಿಧಿಯವರ ಅಪ್ಪಣೆಯ ಮೇರೆಗೆ ಮೂರುಸಾವಿರ ವಿರಕ್ತರ ತಂಡದವರು ಧರ್ಮಪ್ರಚಾರಕ್ಕೆ ಹೊರಡುವ ಮುನ್ನ ಕರ್ತೃ ಜಗದ್ಗುರು ಗುರುಸಿದ್ಧೇಶ್ವರರು, ಸಮಸ್ತ ವಿರಕ್ತರನ್ನೂ ಕರೆದು. ಅವರೆಲ್ಲರಿಗೂ ಕೆಲವು ಮುಖ್ಯವಾದ ಉಪದೇಶದ ಮಾತುಗಳನ್ನು ತಿಳಿಸುತ್ತ "ಕಾಯಕವೇ ಕೈಲಾಸ"ದ ಮಹಿಮೆ ವಿವರಿಸಿ, ದೇಶದ ತುಂಬೆಲ್ಲ ಧರ್ಮಪ್ರಚಾರಾರ್ಥ ಪ್ರತಿಯೊಬ್ಬರೂ ಮಠಗಳನ್ನು ಸ್ಥಾಪಿಸಿ ಬಸತತ್ವ ಪ್ರಚಾರ ಮಾಡಬೇಕೆಂದು ಆಶೀರ್ವದಿಸಿ, ಗ್ರಾಮದ ಸಮಸ್ತ ಭಕ್ತಾದಿಗಳನ್ನು ಕರೆಸಿಕೊಂಡು ಅವರಿಗೂ ಉಪದೇಶಾಮೃತ ಆಶೀರ್ವಾದಗಳನ್ನು ಗೈದು, ಸಹಸ್ರಾರ ವಿರಕ್ತರ, ಶರಣರ, ಅಸಂಖ್ಯಾತ ಭಕ್ತಾದಿಗಳ ಸಮಕ್ಷಮದಲ್ಲಿ ಗವಿಯೊಳಗೆ ಪ್ರವೇಶ ಮಾಡಿದರು.

ಅಂತೂ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರರು ತಮ್ಮ ಅವತಾರ ಕಾರ್ಯವನ್ನು ಮುಗಿಸಿ ಹುಬ್ಬಳ್ಳಿಯ ಮೂರುಸಾವಿರಮಠದಲ್ಲಿ ಜೀವಂತ ನಿರ್ವಿಕಲ್ಪ ಸಮಾಧಿಯಲ್ಲಿ ಕುಳಿತು, ಕರ್ತೃವಾಗಿ ಗದ್ದುಗೆ ಮರೆಯಿಂದಲೇ ಮಠಕ್ಕೆ ದರ್ಶನಾರ್ಥಿಗಳಾಗಿ ಬರುವ ಲಕ್ಷಾಂತರ ಭಕ್ತರಿಗೆ ಬೇಡಿದ ಇಷ್ಟಾರ್ಥಗಳನ್ನು ಸಲಿಸುತ್ತಾ ಜಾತಿ, ಮತ, ಪಂಥಗಳೆಂಬ ಭೇದ-ಭಾವವಿಲ್ಲದೆ ಎಲ್ಲರನ್ನೂ ಕೃಪಾದೃಷ್ಟಿಯಿಂದ ಆವಶೀರ್ವದಿಸಿ ಸಲಹುತ್ತಾ :

ಹುಬ್ಬಳ್ಳಿಯ ಜ್ಯೋತಿಯಾಗಿ
ನಾಡಿನ ನಂದಾದೀಪವಾಗಿ
ಭಕ್ತರ ಕಾಮಧೇನುವಾಗಿ
ಚಿಂತಿಸಿದವರ ಚಿಂತಾಮಣಿಯಾಗಿ

ಸ್ಮರಿಸಿದವರ ಕಲ್ಪತರುವಾಗಿ
 ಗುರುಗಳಿಗೆ ಗುರುಸಿದ್ಧೇಶ್ವರನಾಗಿ
ಯೋಗಿಗಳಿಗೆ ಯೋಗೀಶ್ವರನಾಗಿ
 ಜ್ಞಾನಿಗಳಿಗೆ ಜ್ಞಾನದಾತನಾಗಿ
ನಂಬಿದವರ ಅಂಗೈಯ್ಯ ಲಿಂಗವಾಗಿ
 ತಾನೇ ತಾನಾಗಿ
ಏಕಮೇವಾದ್ವಿತೀಯನಾಗಿ
 ಪರಂಜ್ಯೋತಿಯಾಗಿ
ಬೆಳಗುತ್ತಿದ್ದಾನೆ.

ಕರ್ತೃ ಶ್ರೀಮಜ್ಜಗದ್ಗುರು ಗುರುಸಿದ್ಧೇಶ್ವರರ ಯೋಗ ಸಮಾಧಿಯ ನಂತರ ಕರ್ತೃ ಶ್ರೀಜಗದ್ಗುರು ಗುರುಸಿದ್ಧೇಶ್ವರರು ಅಪ್ಪಣೆಯ ಮೇರೆಗೆ ಮೂರು ಸಾವಿರ ವಿರಕ್ತರ ತಂಡದವರು. ನಾಡಿನ ಹಾಗೂ ಹೊರನಾಡಿನ ನಾನಾ ಭಾಗಗಳಲ್ಲಿ ಸಂಚರಿಸಿ ವೀರಶೈವ ಧರ್ಮ ಪ್ರಚಾರವನ್ನು ಭರದಿಂದ ಕೈಕೊಂಡು ತಮಗೆ ಅನುಕೂಲವಾದ ಸ್ಥಳಗಳಲ್ಲಿ ಅಲ್ಲಲ್ಲಿಯ ಭಕ್ತರ ಕೋರಿಕೆಯಂತೆ ಆಯಾ ಊರುಗಳಲ್ಲಿ ಮಠಗಳನ್ನು ಸ್ಥಾಪಿಸಿ, ಆ ಮಠಗಳಿಗೆ ಒಬ್ಬೊಬ್ಬ ನಿರಂಜನ ವಿರಕ್ತಮೂರ್ತಿಗಳನ್ನು ಪಟ್ಟಕಟ್ಟಿ, ಪೂಬಳ್ಳಿಯ ವೀರಶೈವ ಧರ್ಮದ ಕೀರ್ತಿಪತಾಕೆಯನ್ನು ಹಾರಿಸಿದರು.

ನಂತರ ಜಗದ್ಗುರು ಮೂರುಸಾವಿರೇಶ ರಾಜಯೋಗೀಂದ್ರ ಮಹಾಸ್ವಾಮಿಗಳವರು, ಕಲ್ಯಾಣದಿಂದ ಚೆನ್ನಬಸವಣ್ಣನವರ ನೇತೃತ್ವದಲ್ಲಿ ಶರಣ, ಜಂಗಮರು ತಮ್ಮ ಬೆನ್ನಿಗೆ ಕಟ್ಟಿಕೊಂಡು ತಂದಂತಹ, ಅಮೂಲ್ಯವಾದ ವಚನ ಸಾಹಿತ್ಯಗಳ ತಾಡೋಲೆಗಳನ್ನು ಸುರಕ್ಷಿತವಾಗಿಡಲು ಒಂದು ಪ್ರತ್ಯೇಕವಾದ ಮಠವನ್ನೇ ಕಟ್ಟಿದರು. ಅದಕ್ಕೆ ಓಲಿಮಠವೆಂದು ಹೆಸರಾಯಿತು. ಹುಬ್ಬಳ್ಳಿಯಲ್ಲಿ ಇಂದಿಗೂ ಈ ಓಲಿಮಠವಿದೆ.

ಮಹಾಮಹಿಮರಾದ ಕರ್ತೃ ಶ್ರೀಮದ್‌ಜಗದ್ಗುರು ಗುರುಸಿದ್ಧೇಶ್ವರರ ತಪೋಬಲದಿಂದ, ಪೂಬಳ್ಳಿಯ ಕಲ್ಯಾಣದ ನಂತರ ವೀರಶೈವ ಧರ್ಮದ

ಕೇಂದ್ರವಾಯಿತು, ಅನೇಕ ರಾಜ್ಯಗಳಿಂದ ಅನುಭಾವಿಗಳೂ, ಸಾಧಕರೂ, ಭಾವುಕರೂ, ಪೂಬಳ್ಳಿಗೆ ಬಂದು ನೆಲೆಸಿದರು:

ಕಲ್ಯಾಣದ ಕ್ರಾಂತಿಯಾದ ನಂತರ ಬಸವಾದಿ ಪ್ರಮಥರು ದಿಕ್ಕುಪಾಲಾಗಿ ಬೇರೆ ಬೇರೆ ಕಡೆಗಳಲ್ಲಿ ಲಿಂಗೈಕ್ಯರಾದ ಮೇಲೆ ಲಕ್ಷಾಂತರ ಶರಣರ ಪ್ರಾಣಾರ್ಪಣೆಯಾದ ಘಟನೆಯನ್ನು ಕೇಳಿ, ತಿಳಿದವರನೇಕರು. ವೀರಶೈವ ಧರ್ಮವು ಇನ್ನು ಮೊದಲಿನ ಸ್ಥಿತಿಯಲ್ಲಿ ಉಳಿಯಲಾರದು ಅದು ಮೂಲೆಗುಂಪಾಯಿತು ಎಂದುಕೊಂಡಿದ್ದವರಿಗೆ ಪೂಬಳ್ಳಿಯ ಸುದ್ದಿ ಕೇಳಿ ಆಶ್ಚರ್ಯವಾಯಿತು. ಮತ್ತೆ ಸಹಸ್ರಾರು ಶರಣರು, ಜಂಗಮರು, ವೀರಶೈವ ಧರ್ಮ ಪ್ರಚಾರಾರ್ಥವಾಗಿ ಭಾರತದ, ನಾನಾ ಭಾಗಗಳಿಗೆ ತೆರಳಿದರು.

ಅಂತೂ ಪೂಬಳ್ಳಿಯು ಹನ್ನೆರಡನೆಯ ಶತಮಾನದಲ್ಲಿ ವೀರಶೈವಧರ್ಮದ ಕೇಂದ್ರವಾಗಿ ದ್ವಿತೀಯ ಕಲ್ಯಾಣವೆಂದೆನಿಸಿತು.

ಇದು ಕಟ್ಟುಕಥೆಯಲ್ಲ, ಊಹಾಪೋಹದ ಮಾತಲ್ಲ. ಐತಿಹಾಸಿಕವಾದ ಸತ್ಯಸಂಗತಿ ಇದಕ್ಕೆ ಆಧಾರಗಳಿವೆ; ಶಾಸನಗಳ ಸಾಕ್ಷಿಯಿದೆ.

ಚೆನ್ನಬಸವಣ್ಣನವರು, ಮೂರುಸಾವಿರ ವಿರಕ್ತರೊಡನೆ ಪೂಬಳ್ಳಿಗೆ ಬಂದು, ಹೊಂಡದ ಹತ್ತಿರ ಗುರುಸಿದ್ಧೇಶ್ವರರ ಆಶ್ರಮದಲ್ಲಿ ವಾಸ್ತವ್ಯ ಮಾಡಿದುದರ ಕುರುಹಾಗಿ ಪೂಬಳ್ಳಿಯವರು ಚೆನ್ನಬಸವೇಶ್ವರರ ಗುಡಿಯನ್ನು ಅದೇ ಸ್ಥಳದಲ್ಲಿ ಕಟ್ಟಿದ್ದಾರೆ. ಇಂದಿಗೂ ಆ ಗುಡಿಯಿದೆ. ಇದಲ್ಲದೆ, ಶಾಸನದ ಆಧಾರವಿಡಿದು ಹೇಳಬೇಕಾದರೆ ಡಾ॥ ಪ್ರೊ. ಉಮರ್ಜಿಯವರ ಲೇಖನವನ್ನು ನೋಡಬಹುದು.

೧೩-೧೦-೧೯೫೭ ನೇ ಇಸ್ವಿಯಲ್ಲಿ ಹುಬ್ಬಳ್ಳಿಯಿಂದ ಪ್ರಕಟವಾದ "ಕರ್ಮವೀರ" ವಾರ ಪತ್ರಿಕೆಯಲ್ಲಿ "ಊರ ಹೆಸರುಗಳು ಹೇಗೆ ತಲೆಯೆತ್ತಿದವು" ಎಂಬ ಶಿರೋನಾಮೆಯಲ್ಲಿ ಡಾ॥ ಪ್ರೊ. ವರದರಾಜ ಉಮರ್ಜಿ, M. A. Ph-D. ಅವರು ಪ್ರಕಟಿಸಿದ ಲೇಖನದ ಪ್ರಮಾಣದಂತೆ ಹುಬ್ಬಳ್ಳಿ ಮೂರು ಸಾವಿರಮಠದ ಬಗ್ಗೆ ಶಿರಸಿ ಶಾಸನದ ಪ್ರಮಾಣವನ್ನು ವಾಚಕರು ಮನಗಾಣಬಹುದು.

**"ಊರ ಹೆಸರುಗಳು ಹೇಗೆ ತಲೆಯೆತ್ತಿದವು" :**

ಉತ್ತರ ಅಕ್ಷಾಂಶ ೧೫'೨೦ ಪೂರ್ವ ರೇಖಾಂಶ ೭೫'೧೩ ರಲ್ಲಿರುವ ಒಂದು ದೊಡ್ಡ ವ್ಯಾಪಾರ ಕೇಂದ್ರ. ಈ ಪಟ್ಟಣದಲ್ಲಿ ಹಳೇಹುಬ್ಬಳ್ಳಿ ಹೊಸ ಹುಬ್ಬಳ್ಳಿ ಎಂದು ಎರಡು ಭಾಗಗಳಿವೆ. ಹುಬ್ಬಳ್ಳಿಯ ಮೂಲವೇನು? ಅರ್ಥವೇನು ? ಪುಬ್ಬಳ್ಳಿ ಎಂಬುದನ್ನು ಮೂಲರೂಪವೆಂದು ಗ್ರಹಿಸಿ ಗ್ಯಾಜಿಟೀಯರದವರು ಪು. ಬ. (ಪೂರ್ವದ) +ಹಳ್ಳಿ ಎಂದು ನಿರ್ವಚನವನ್ನು ಕೊಟ್ಟು ಪೂರ್ವದ ಹಳೇಯ ಹಳ್ಳಿಯೆಂದು ಅರ್ಥ ಮಾಡಿದ್ದಾರೆ. ಆದರೆ ಪ್ರಾಚೀನ ಹೆಸರು ಪೂವಳ್ಳಿ ಎಂದು ಕಲಚೂರ್ಯರ ೧೨ನೆಯ ಶತಮಾನದ ಶಿರಸಿ ಶಾಸನದಲ್ಲಿ ಉಲ್ಲಿಖಿತವಾಗಿದೆ. ಪೂ–ಹೂ+ವಳ್ಳಿ–ಪಳ್ಳಿ–ಹಳ್ಳಿ ಹೂವಿನ ಹಳ್ಳಿ ಎಂದು ಅರ್ಥ, ಪೂವಳ್ಳಿಯಲ್ಲಿ ಉಳಿದ 'ಪ' ಕಾರವು ೭ ನೇ ಹಾಗೂ ಅನೇಕ ಶತಮಾನವನ್ನು ಸೂಚಿಸುವುದಾದರೂ ಪಳ್ಳಿ ಎಂಬುದು ವಳ್ಳಿಯಾದದ್ದು ೭ನೇ ಶತಮಾನದ ನಂತರ. ಪೊಸವಳ್ಳಿ, ಹೊಸವಳ್ಳಿ, ಎಂಬ ರೂಪಗಳು ೧೦೭೧ರ ಶಿಲಾಶಾಸನದಲ್ಲಿ ದೊರೆಯುವವು. ಪೂವಳ್ಳಿಯು ೧೨ ನೆಯ ಶತಮಾನದ ಪೂರ್ವದಲ್ಲಿ ಅಂದರೆ ೯ನೇ ಇಲ್ಲವೆ ೧೦ ನೇ ಶತಮಾನದಲ್ಲಿ ಅಸ್ತಿತ್ವದಲ್ಲಿರಬಹುದು. ಹುಬ್ಬಳ್ಳಿ, ಅಣ್ಣಿಗೇರಿ, ಕಲಚೂರ್ಯರ ಆದಕ್ಕೂ ಮೊದಲು ಚಾಲುಕ್ಯರ ವಶದಲ್ಲಿರಬಹುದು. ಹಳೆಯ ಹುಬ್ಬಳ್ಳಿ ರಾಯರಹುಬ್ಬಳ್ಳಿ ಎನ್ನುವುದು ವಿಜಯನಗರದ ಸಂಬಂಧವನ್ನು ಸೂಚಿಸುವುದು. ಶಿರಸಿ ಶಾಸನದಲ್ಲಿ ಪೂವಳ್ಳಿ ಎಂಬುದು ಮೂರುಸಾವಿರಮಠದ ಸಂಬಂಧದಲ್ಲಿ ಉಕ್ತವಾದದ್ದರಿಂದ ಅದು ಹನ್ನೆರಡನೇ ಶತಮಾನದಿಂದಲೂ ಲಿಂಗಾಯತ ಸಮಾಜದ ಕೇಂದ್ರವಾಗಿತ್ತೆಂದು ಸೂಚಿತವಾಗುವದಿಲ್ಲವೇ ? ಪೂವಳ್ಳಿಯು ಈಗಿನಂತೆ ಹುಬ್ಬಳ್ಳಿಯಾಗಿರದೆ ಸೃಷ್ಟಿಸೌಂದರ್ಯದ ನೆಲೆವೀಡಾಗಿತ್ತೆಂದು ತೋರುವುದು.

ಹುಬ್ಬಳ್ಳಿ ಹತ್ತಿರವಿರುವ ಅದರಗುಂಚಿ (ಅದಿರ್ಗಂಚಿ) ಎಂಬುದೂ ವಾಸನ್ತೀ ಎಂಬ ಹೂಬಳ್ಳಿಯ ಹೆಸರೇ ಆಗಿದೆ. ಅದಿರಗಂಚಿಯ ದೊಡ್ಡಪ್ಪನ ಮೂರ್ತಿಯು ಜೈನರ ಕುರುಹು ಆಗಿರುವುದಲ್ಲವೇ? "ಹುಬ್ಬಳ್ಳಿ ಹೆಬ್ಬಳ್ಳಿ ಹಬ್ಬೀತುರಸಬಳ್ಳಿ" ಎಂದು ಜೋಗುಳದ ಹಾಡು ಹೆಬ್ಬಳ್ಳಿ, ಪೆರ್ಬಳ್ಳಿ ಎಂಬುದು ಅದರ ಪ್ರಾಚೀನ ಹೆಸರು, ದೊಡ್ಡ ಹಳ್ಳಿ ಎಂಬುದು ಅದರ ಅರ್ಥ

ಪೆಬ್ಬರ್ಳ್ಳಿಯಲ್ಲಿ ಉಳಿದ "ಪ" ಹಾಗೂ ಪಳ್ಳಿಗಳು ಅದು ಪೂವಳ್ಳಿಯ ಸಮ ಕಾಲೀನವೆಂದು ಸೂಚಿಸುವವು.

ಹೀಗೆ ಶಿರಸಿ ಶಾಸನದ ಆಧಾರವಿರುವುದರಿಂದ ೧೨ನೆಯ ಶತಮಾನದಲ್ಲಿ (ಹುಬ್ಬಳ್ಳಿಯು) ಪೂವಲ್ಲಿಯು ವೀರಶೈವ ಧರ್ಮದ ಕೇಂದ್ರವಾಗಿತ್ತೆಂದು ಧಾರಾಳವಾಗಿ ಹೇಳಬಹುದು. ೯೦ ವರ್ಷದ ವಯೋವೃದ್ಧರೂ, ಸಾಮಾಜಿಕ ಕಾರ್ಯಕರ್ತರೂ, ಜ್ಞಾನ ವೃದ್ಧರಾದ ಡಾ|| ಎಚ್. ಎಫ್. ಕಟ್ಟಿಮನಿಯ ವರೊಡನೆ ಹುಬ್ಬಳ್ಳಿ ಮೂರುಸಾವಿರಮಠದ ಬಗ್ಗೆ ಪ್ರಸ್ತಾಪವೆತ್ತಿದಾಗ, ಈ ಮೂರುಸಾವಿರಮಠವು ೧೨ ನೆಯ ಶತಮಾನದಿಂದಲೂ ಇದರ ಪ್ರಭಾವವು ಇತ್ತೆಂದು ಹಾಗೂ ಶರಣರ ತತ್ತ್ವವನ್ನು ಪ್ರಚಾರ ಮಾಡುತ್ತ ಬಂದಿದೆ ಯೆಂದು ಹೇಳಿದರಲ್ಲದೆ, ನಮ್ಮ ವಂಶಜರೂ ಸಹ ಈ ಪೀಠದ ಒಡೆಯರಾಗಿ ಸಾಮಾಜಿಕ, ಧಾರ್ಮಿಕ ಸೇವೆಯನ್ನು ಮಾಡಿದ್ದಾರೆಂದು ತಿಳಿಸಿದರು.

ಮತ್ತು ಕಳೆದ ೬೦ ವರ್ಷಗಳಿಂದ ಏಕನಿಷ್ಠೆಯಿಂದ ಮೂರುಸಾವಿರ ಮಠದ ಸೇವೆ ಮಾಡಿದ, ಶಿವೈಕ್ಯರಾದ ಸೊಲಬಪ್ಪಜ್ಜ ದುಂಡಸಿ ಅವರನ್ನು ಮೂರುಸಾವಿರಮಠದ ಪರಂಪರೆಯ ಇತಿಹಾಸದ ಬಗ್ಗೆ ಕೇಳಿ ತಿದುಕೊಂಡಾಗ ಅವರು, ಅನೇಕ ವಯೋವೃದ್ಧ ಭಕ್ತರ ಅಭಿಪ್ರಾಯವು ಸಹ ೧೨ನೆಯ ಶತಮಾನದಿಂದ ಬಸವ ತತ್ತ್ವವನ್ನು ಪ್ರಚಾರ ಮಾಡುತ್ತ ಮೂರುಸಾವಿರ ಮಠವು ಬಂದಿದೆಯೆಂದು ಹೇಳಿದ್ದನ್ನು ತಿಳಿಸಿದರಲ್ಲದೆ, ಈ ಪುಸ್ತಕದ ಲೇಖಕ ರನ್ನು ೩-೪ ದಿನಗಳ ವರೆಗೆ ತಮ್ಮ ಹತ್ತಿರ ಇರಿಸಿಕೊಂಡು, ನಡೆದುಹೋದ ಅನೇಕ ಪವಾಡಗಳನ್ನೂ, ಇನ್ನಿತರ ಮಹತ್ತ್ವದ ಘಟನೆಗಳನ್ನೂ, ಹೇಳಿ ಬರೆಸಿದ್ದರಿಂದ ಈ ರೀತಿಯಾಗಿ ಪುಸ್ತಕದಲ್ಲಿ ಹೆಣೆಯಲಾಗಿದೆ. ಇನ್ನೊಬ್ಬ ಮಠದ ಸದ್ಭಕ್ತರಾದ ಸೋಮಯ್ಯನವರು ಕಲ್ಲಯ್ಯಸಮಠ ಅವರು ಸಹ, ಇದೇ ರೀತಿಯಾಗಿ ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೇ, ಶಿರಸಿ ಶಾಸನವನ್ನೂ ಸಹ ಲಿಂ. ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು ತಾವಿರುವಾಗ ಪ್ರತ್ಯಕ್ಷ ನೋಡಿದ್ದೇವೆ ಎಂದು ತಿಳಿಸಿದ್ದಾರೆ. ಮತ್ತು ಧಾರವಾಡ-ಹುಬ್ಬಳ್ಳಿ ಹಾಗೂ ನೆರೆಹೊರೆಯ ಅನೇಕ ಹಳ್ಳಿಯ ನೂರಾರು ಜನ ಭಕ್ತರನ್ನು ವಿಚಾರಿಸಿದಾಗ, ಅವರು ಸಹ ಮೇಲಿನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಈಗಿರುವ ಗೋಕಾಕ ತಾಲೂಕಿನಲ್ಲಿರುವ ಅಂಕಲಗಿ ಅಡವಿಸಿದ್ಧೇಶ್ವರರು ಸಹ ಕಲ್ಯಾಣದಿಂದ ಚೆನ್ನಬಸವಣ್ಣನವರ ಅನುಯಾಯಿಗಳಾಗಿ ಹನ್ನೆರಡನೆಯ ಶತಮಾನದಲ್ಲಿ ಬಂದವರು, ಪೂಬಳ್ಳಿಯಿಂದ ಅಂಕಲಗಿಗೆ ಹೋಗಿ ನೆಲಸಿದ, ರೇಚಣ್ಣನೆಂಬ ಶರಣರು ಎಂಬು ಅಂಕಲಗಿಯ ಅಡಿವೆಪ್ಪನವರು, ಮುಂತಾದ ಭಕ್ತರಿಂದ ತಿಳಿದುಬರುತ್ತದೆ.

ಇದೂ ಅಲ್ಲದೇ ಮೂರುಸಾವಿರಮಠದ ಪ್ರಾಚೀನತೆಯ ಬಗ್ಗೆ, ಕನ್ನಡ ಗ್ರಂಥ ಸಂಪಾದನೆ ಎಂಬ ಗ್ರಂಥವಲ್ಲಿ D. L. ನರಸಿಂಹಾಚಾರ್, M. A. ಡಿಲಿಟ್ ಅವರು ಬರೆದಿರುವ ಲೇಖನವನ್ನು ಓದುಗರು ಗಮನಿಸಬಹುದು.

ಶ್ರೀ ಶ್ರೀಮನ್‌ನೃಪ ಶಾಲಿವಾಹನ ಶತಾಬ್ಧ ಪರಿಮಿತ ೧೩೫೩ ಮನ್ಮಥ ನಾಮ ಸಂವತ್ಸರೇ ಫಾಲ್ಗುಣ ಮಾಸೇವುತ್ತರಾಯಣೇ ಶಶಿರುಕಾ ಶುಕ್ಲ ಪಕ್ಷೇ ೧೨ ಸೋಮವಾರೇ–ಪುಷ್ಯ ನಕ್ಷತ್ರೇ ಶೋಭನ ನಾಮ ಯೋಗೇ ವೈಯ್ಯಾಕರಣಕ್ಕೆ ||೦|| ಶ್ರೀ ಬಸವೇಶ್ವರ ದೇವರ ಪುರಾಣ ಬರೆದು ಸಂಪೂರ್ಣವಾಯಿತು. ಈ ಪುಸ್ತಕವಂ ಬರೆಸಿದವರು ಆರು ಎಂದರೆ |

ಶ್ರೀಮನ್‌ಮಹಾನಿರಂಜನ ಜಗದ್ಗುರು ಸೂನ್ಯ ಸಿಂಹಾಸನಾಧೀಶ್ವರ ಭ್ರೂಮಪುರದ ಮೂರು ಸಾಹಸ್ರ ಮಠಾಧಿಕಾರಿಗಳಾದ–ಗಂಗಾಧರ ಸ್ವಾಮಿಯವರ ಕರಕಮಲೋದ್ಭವರಾದ ಗುರುಸಿದ್ಧಸ್ವಾಮಿಯವರು ಬರಿಸಿದ್ದು ಸಿದ್ಧಾಂತವು || ಶ್ರೀ|| ರಸ್ತು||

ಜಿಲ್ಲಾ ಧಾರವಾಡ ಕಸಬ ಮಂಗಳವಾರಪೇಟೆ ವಿರಕ್ತಮಠದಲ್ಲಿ ಬರಸಿದ್ದು ಪ್ರಸಿದ್ಧವೂ || ಶ್ರೀ ಶ್ರೀ ಯಿೂಪುಸ್ತಕವ ಬರೆದವರು ಆರುಯಂದರೆ ನಿಡುಮಾಮಿಡಿ ಶ್ರೀ ಕರೆಬಸವಸ್ವಾಮಿಯವರ ವಂಶಪಾರಂಪರಿಯಲ್ಲಿ ಜನಿಸಿದ ಶ್ರೀ ರೇವಣಾಸಿದ್ಧೇಶ್ವರರ ಸಾಂಪ್ರದಾಯಕರಾದ ಷಡ್ವಿಡೀ ಸೂತ್ರದ ಕಿತ್ತೂರು ವೀರೇಶ್ವರಗೋತ್ರದ ದೇಶದ ಬಯುಲಹೊಂಗಲದ ಮಠದ ಶಂಕ್ರಪ್ಪನವರ ಆತ್ಮಜನಾದ ಷಣ್ಮುಖಯ್ಯನಿಂ ಬರಿಯಲ್ಪಟ್ಟಿತು.

ಆಧಾರ : "ಕನ್ನಡ ಗ್ರಂಥ ಸಂಪಾದನೆ" ಪುಟ : ೫೦

ಸಂಪಾದಕರು:– ಗ್ರಂಥಕರ್ತ:– **D. L. ನರಸಿಂಹಾಚಾರ್**

ಪ್ರಕಾಶಕರು:–

ಮೊದಲನೆಯ ಮುದ್ರಣ: **1964**

ಎರಡನೆಯ ಮುದ್ರಣ: **1970**

ಜಗದ್ಗುರು ಮೂರುಸಾವಿರಮಠವು ಸ್ಥಾಪಿತವಾದ ನಂತರ ಧರ್ಮ ಪ್ರಚಾರಕ್ಕೆ ಹೋದ ಮೂರುಸಾವಿರ ವಿರಕ್ತರು ತಾವು ಅನೇಕ ಊರುಗಳಲ್ಲಿ ಸ್ಥಾಪಿಸಿದ್ದ ಮಠಗಳಿಗೂ ಮೂರುಸಾವಿರಮಠದ ಶಾಖಾ ಮಠಗಳೆಂದೇ ಹೆಸರಿಟ್ಟರು. ಈ ರೀತಿ ಸ್ಥಾಪಿತವಾದ ಮಠಗಳು ಕೇವಲ ಕರ್ನಾಟಕದಲ್ಲಷ್ಟೇ ಅಲ್ಲದೇ ಆಂಧ್ರ, ತಮಿಳುನಾಡು, ಮಹಾರಾಷ್ಟ್ರ, ಮುಂತಾದ ಪ್ರಾಂತಗಳಲ್ಲೂ ಹರಡಿಕೊಂಡಿವೆ. ಆದರೆ ಕಾಲಮಾನ ಪರಿಸ್ಥಿತಿಗನುವಾಗಿ ಕೆಲವು ಮಠಾಧಿಪತಿಗಳು ಹೆಸರನ್ನು ಬದಲಾಯಿಸಿ, ಸ್ವತಂತ್ರರಾದದ್ದೂ ಉಂಟು. ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಕಾಲದಲ್ಲಿ ಹುಬ್ಬಳ್ಳಿ ಒಂದೇ ಊರಲ್ಲಿ ಅಷ್ಟಮಠಗಳು ವೀರಶೈವರ ಲಾಂಛನವಾದ ಅಷ್ಟಾವರಣಗಳ ಸ್ಮರಣಾರ್ಥವಾಗಿ ಸ್ಥಾಪಿತವಾಗಿದ್ದು. ಈ ಅಷ್ಟಮಠಗಳಲ್ಲದೆ, ಓಲೆಮಠ, ಮೂಲ ಕರ್ತೃ ಗದ್ದುಗೆಯುಳ್ಳ ಕೇಂದ್ರಮಠ. ಜಗದ್ಗುರು ಗುರುಸಿದ್ಧೇಶ್ವರರ ನಂತರ, ಅಧಿಕಾರಕ್ಕೆ ಬಂದ ಜಗದ್ಗುರು ಗಂಗಾಧರ ಮಹಾಸ್ವಾಮಿಗಳವರೂ, ಸಾಕಷ್ಟು ಧರ್ಮ ಜಾಗ್ರತಿ ಕಾರ್ಯಗಳನ್ನು ಮಾಡಿದರು. ಮುಂದೆ ಅಧಿಕಾರಕ್ಕೆ ಬಂದ ಕೆಲವರು, ಮಹಾವೈರಾಗ್ಯಮೂರ್ತಿಗಳಾಗಿ, ದೇಶಪರ್ಯಟನೆ ಮಾಡಿ, ತಮ ತಮಗೆ ಮನ ಒಪ್ಪಿದ ಸ್ಥಳಗಳಲ್ಲಿ ಸಮಾಧಿಸ್ಥರಾದರು. ಅಂತೂ ಬರ ಬರುತ್ತಾ ಕೇಂದ್ರ ಮಠಕ್ಕೆ ಪೀಠಾಧಿಕಾರಿಗಳಾದ ಜಗದ್ಗುರುಗಳವರ ಅಲಕ್ಷ್ಯತನದಿಂದಲೂ, ಕಾಲಮಾನ ಪರಿಸ್ಥಿತಿಯಂತೆ ಕೆಲವು ಸ್ವಾರ್ಥಸಾಧಕರಾದ ಭಕ್ತ ಜನರಿಂದಲೂ ಎಷ್ಟೋ ಊರುಗಳಲ್ಲಿರುವ ಶಾಖಾ ಮಠಗಳ ಹಾಗೂ ಅವುಗಳಿಗೆ ಸಂಬಂಧಪಟ್ಟ ಆಸ್ತಿಗಳ ವಿಷಯವೇ ತಿಳಿಯದೆ ಕೇಂದ್ರಮಠಕ್ಕೂ ಆ ಶಾಖಾ ಮಠಗಳಿಗೂ ಸಂಬಂಧಗಳೇ ತಪ್ಪಿಹೋಗಿವೆ. ಕೆಲವು ಶಾಖಾ ಮಠಗಳಂತೂ ಸರಿಯಾದ ಆಡಳಿತಗಾರರಿಲ್ಲದೆ ನೆಲಸಮವಾದ ಉದಾಹರಣೆಗಳು ಸಾಕಷ್ಟಿವೆ.

ಅಥಣಿ ತಾಲೂಕಿನ ರಡ್ಡೇರಹಟ್ಟಿಯಲ್ಲಿ ಈಗಿನ ಹುಬ್ಬಳ್ಳಿ ಜಗದ್ಗುರುಗಳವರ ಅಧ್ಯಕ್ಷತೆಯಲ್ಲಿ ಹಾಗೂ ಇಲಕಲ್ಲಿನ ಶ್ರೀ|| ನಿ|| ಪ್ರ|| ಸ್ವ ಗಳಾದ ಸವದಿ ಮಹಾಂತಸ್ವಾಮಿಗಳವರ ನೇತೃತ್ವದಲ್ಲಿ ಏಕಾದಶ ಮಂಟಪಪೂಜಾ ಮಹೋತ್ಸವವು ಜರುಗಿತು. ಆಗ ಈ ಗ್ರಂಥದ ಲೇಖಕನಾದ ನಾನೂ ಸಹ ಕೀರ್ತನೆ ಸೇವೆಸಲ್ಲಿಸಲು ಹೋಗಿದ್ದೆ. ಮಂಟಪ ಮಹೋತ್ಸವವು ಬಹಳ

ವಿಜೃಂಭಣೆಯಿಂದ ಜರುಗಿತು ಇಡೀ ಬೆಳಗಾಂವ ಜಿಲ್ಲೆಯೇ ಬೆರಗಾಗುವಂತೆ. ಸಣ್ಣ ಹಳ್ಳಿಯಲ್ಲಿ ಇಷ್ಟೊಂದು ಅದ್ದೂರಿಯಿಂದ ಜರಗಿದ, ಮಹೋತ್ಸವವನ್ನು ಕಂಡು ಜಗದ್ಗುರು ಮಹಾಸನ್ನಿಧಿಯವರು ಬಹಳ ಸಂತೋಷಪಟ್ಟು ಅಲ್ಲಿನ ಪ್ರಮುಖರನ್ನು ಕರೆಸಿ, ಏನ್ರಪಾ ನಿಮ್ಮ ಸಡ್ಡೇರಹಟ್ಟಿ ಊರು ಬಹಳ ಸಣ್ಣದು ಆದರೆ ನೀವು ಮಾಡಿದ ಈ ಕಾರ್ಯ ಬಹಳ ದೊಡ್ಡದು ನಿಮ್ಮೂರ ಜನರು ಬಹಳ ಒಳ್ಳೆಯವರು ಮಂಟಪ ಪೂಜಾ ಬಹಳ ಚನ್ನಾಗಿ ಆಯ್ತು ಆಗಮಿಸಿದ್ದ ಎಲ್ಲಾ ಜಂಗಮಮೂರ್ತಿಗಳು ಆನಂದಪಟ್ಟರು, ಕಾರ್ಯಕ್ರಮಗಳು ಎಲ್ಲಾ ಯಶಸ್ವಿಯಾದುವು. ಮೇಲಾಗಿ ನಮ್ಮನ್ನು ಎಷ್ಟೋ ದೂರದಿಂದ ಭಕ್ತಿಯಿಂದ ಕರೆಸಿಕೊಂಡಿದ್ದು, ನಮಗೂ ಸಂತೋಷ ಆಯ್ತು, ನಾವು ಈ ಊರ ನೋಡಿದ್ದಿಲ್ಲ, ಈ ಊರ ಹೆಸರೇ ಕೇಳಿದ್ದಿಲ್ಲ ಎಂದು ಹೇಳಿದಾಗ ಅಲ್ಲಿನ ಪ್ರಮುಖರು ಬುದ್ಧಿ ಇದು ನಮ್ಮ ಊರಲ್ಲ ಖರೇ ನೋಡಿದರೆ ನಿಮ್ಮ ಊರು ನಿಮ್ಮ ಊರಾಗ ನಿಮ್ಮ ನೆರಳಲ್ಲಿ ನಾವು ಇದ್ದೇವೆ. ಈ ಊರಾಗ ನಿಮ್ಮ ಮೂರುಸಾವಿರಮಠದ ಹದಿನಾಲ್ಕು ಎಕರೆ ಉತ್ತಮ ಫಲವತ್ತಾದ ಜಮೀನು ಇದೆ; ಹಿಂದಕ್ಕೆ ಮಠಾನೂ ಇತ್ತಂತೆ ಅದು ಏನಾಯ್ತೋ, ಎಲ್ಲೈತೋ ನಮಗ ಗೊತ್ತಿಲ್ಲ ಜಮೀನ ಮಾತ್ರ ಐತಿ ನಮಗೆಲ್ಲಾ ಗೊತ್ತೈತಿ. ಅಂದ ಮೇಲೆ ಇದು ನಿಮ್ಮೂರೇ ಅಂದಾಗ ಜಗದ್ಗುರು ಮಹಾಸನ್ನಿಧಿಯವರು ಆಶ್ಚರ್ಯಚಕಿತರಾದರು. ಖರೇ ಏನ್ರಪಾ ಅಂದಾಗ ಖರೇ ಬುದ್ಧಿ ಅಂದಲ್ಲೇ ತಮ್ಮನ್ನು ಕರೆಸಿಕೊಂಡು ತಮ್ಮ ಅಧ್ಯಕ್ಷತೆಯಲ್ಲಿ ಈ ಮಹಾಕಾರ್ಯವನ್ನು ನಡೆಸಿದೆವು ಅಂದರು.

ಈಗಿನ ಜಗದ್ಗುರುಗಳು ಅಧಿಕಾರಕ್ಕೆ ಬಂದು ಹದಿನಾಲ್ಕು ವರ್ಷಗಳೂ ಕಳೆದರೂ ಈ ಊರಲ್ಲಿ ಅವರ ಜಮೀನು ಆಸ್ತಿ ಇರುವ ವಿಷಯ ಇನ್ನೂವರೆಗೆ ಅವರಿಗೆ ತಿಳಿದಿರಲಿಲ್ಲ.

ಅಂತೂ ಒಂದು ಕಾಲದಲ್ಲಿ ಹನ್ನೆರಡನೆಯ ಶತಮಾನದಲ್ಲಿ ವೀರಶೈವ ಧರ್ಮದ ಕೇಂದ್ರವಾಗಿದ್ದು ಕೀರ್ತಿ ಶಿಖರದ ತುಟ್ಟತುದಿಗೇರಿದ್ದ ಹುಬ್ಬಳ್ಳಿಯ ಜಗದ್ಗುರು ಮೂರುಸಾವಿರಮಠವು ಬರಬರುತ್ತಾ ಇಳಿಮುಖವಾಗುತ್ತಾ ಕಳೆಗುಂದುತ್ತಾ ಬಂದಿತು. ಇದಕ್ಕೆ ಎರಡು ಕಾರಣಗಳಿವೆ. ಮೊದಲನೆಯದಾಗಿ

ಕೇಂದ್ರ ಮಠದ ಅಧಿಕಾರ ವಹಿಸಿಕೊಂಡ ಜಗದ್ಗುರು ಮಹಾಸ್ವಾಮಿಗಳವರ ಉದಾಸೀನತೆ; ಎರಡನೆಯದಾಗಿ ಮಠದ ಸ್ವಾರ್ಥಪರರಾದ ಪಂಚಪ್ರಮುಖರು. ಮೂಲ ಕರ್ತೃ ಜಗದ್ಗುರು ಗುರುಸಿದ್ಧೇಶ್ವರರ ಕಾಲದಿಂದ ಐದಾರು ತಲೆಮಾರುಗಳ ವರೆಗೆ ಒಳ್ಳೆಯ ಕೀರ್ತಿ ಪಥದಲ್ಲಿ ಸಾಗಿದ ಮೂರುಸಾವಿರ ಮಠವು ನಂತರ ಅಧಿಕಾರಕ್ಕೆ ಬಂದ ಕೆಲವು ಜಗದ್ಗುರು ಮಹಾಶಯರುಗಳ ಅಲಕ್ಷತನದಿಂದ ಮಠದ ಆಡಳಿತದ ಕಡೆಗೆ ಲಕ್ಷ್ಯಕೊಡದೇ ಇದ್ದುದರಿಂದ ಮಠವು ಜೀರ್ಣಾವಸ್ಥೆಗೆ ಬಂದಿತು. ಅದರ ಕೀರ್ತಿಯು ಸಹ ಇಳಿಮುಖವಾಗುತ್ತಾ ಬಂದಿತು. ಹೆಸರಿಗೆ ಮಾತ್ರ ಜಗದ್ಗುರು ಮಠವಾಗಿತ್ತು.

ಸುಮಾರು ೧೫-೧೬ ನೆಯ ಶತಮಾನದಲ್ಲಿ ಮೂರುಸಾವಿರಮಠದ ಪ್ರಭೆಯು ಮತ್ತೆ ಬೆಳೆಯುತ್ತ ಬಂದಿತು. ಅನೇಕ ರೀತಿಯಿಂದ ಧಾರ್ಮಿಕ ಜಾಗೃತಿಯಾಯ್ತು. ಮತ್ತೆ ಕೆಲವು ವರ್ಷಗಳು ಗತಿಸಿದ ನಂತರ, ಕರ್ನಾಟಕದ ಅನೇಕ ಮಠಾಧೀಶರಲ್ಲಿ ಅನೇಕ ಬಿನ್ನಾಭಿಪ್ರಾಯ ಬಂದು, ಸುಮಾರು ೧೬ನೇ ೧೮ನೆಯ ಶತಮಾನದಲ್ಲಿ ಸಮಯ ಭೇದಗಳನ್ನು ಕಲ್ಪಿಸಿಕೊಂಡಂತೆ ಕಾಣುತ್ತದೆ. ಒಂದೊಂದು ಸಮಯಕ್ಕೆ ಒಂದೊಂದು ಮುಖ್ಯ ಪೀಠವಿರಲೆಂದು ಕಲ್ಪಿಸಿಕೊಂಡು, ಮೂರುಸಾವಿರುಮಠವು "ಕುಮಾರಸಮಯಕ್ಕೆ" ಮೂಲವೆಂದು ಭಾವಿಸಿದಂತೆ ಕಾಣುತ್ತದೆ. ಅಂದಿನಿಂದ ಕುಮಾರ ಸಮಯದ ಮುಖ್ಯ ಪೀಠವೆಂದು ಕರೆಯುವಂತೆ ಕಾಣುತ್ತದೆ. ೧೬ನೆಯ ಶತಮಾನದ ನಂತರ ಮತ್ತೆ ಈ ಮೂರುಸಾವಿರಮಠದ ಉಜ್ವಲ ಪ್ರಭೆಯು ಕಡಿಮೆಯಾಗುತ್ತ ಬಂದು ಕೇವಲ ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಸಮಾಧಿಯ ಶಕ್ತಿಯ ಪ್ರಭೆಯು ನವಚೈತನ್ಯವನ್ನು ಮಾಡಿಸುತ್ತಿತ್ತು. ೧೮ ನೆಯ ಶತಮಾನದಲ್ಲಿ ಜಗದ್ಗುರು ಮೂರುಸಾವಿರಮಠಕ್ಕೆ ಟೊಪಿಗಿ ಸಿದ್ಧಲಿಂಗ ಸ್ವಾಮಿಗಳು ಪೀಠಾರೋಹಣ ಮಾಡಿ, ಪ್ರಭಾವಪೂರ್ಣ ವ್ಯಕ್ತಿತ್ವವನ್ನು ಪಡೆದವರಾಗಿ, ಶಾಪಾನುಗ್ರಹ ಸಾಮರ್ಥ್ಯವನ್ನು ಹೊಂದಿದ್ದರೆಂದು ಕಿತ್ತೂರಿನ ಸದ್ಭಕ್ತರೊಬ್ಬರು ಜನೇವರಿ ೨೯, ೧೯೦೭ನೆಯ ಇಸ್ವಿಯಲ್ಲಿ ಪ್ರಕಟಿಸಿದಮೂರು ಸಾವಿರಮಠದ ಇತಿಹಾಸದಲ್ಲಿ ಈ ವಿಷಯ ಇರುತ್ತದೆ. ಅಲ್ಲದೇ, ಅವರ ತರುವಾಯ ಜಗದ್ಗುರು ಗಂಗಾಧರ ಸ್ವಾಮಿಗಳು, ಅವರ ತರುವಾಯ ಧಾರವಾಡದ ಸಿದ್ಧಲಿಂಗಸ್ವಾಮಿಗಳು, ಅವರ ತರುವಾಯ ಹುಬ್ಬಳ್ಳಿ ಕಲ್ಲಯ್ಯನ ಮಠದ

ಗಂಗಾಧರಸ್ವಾಮಿಗಳು ಈ ಪೀಠವನ್ನು ವಹಿಸಿಕೊಂಡು ಭಕ್ತೋದ್ಧಾರ ಮಾಡಿ ದ್ದಾರೆಂದು ಬರೆದಿದ್ದಾರೆ. ಆ ನಂತರ ಕಲ್ಲಯ್ಯನಮಠ ಶಿವಲಿಂಗ ಮರಿದೇವರಿಗೆ ಗುರುಸಿದ್ಧಸ್ವಾಮಿಗಳೆಂದು ನಾಮವಿರಿಸಿ ಪೀಠಾರೋಹಣ ಮಾಡಿಸಿದರೆಂದು ತಿಳಿದುಬರುತ್ತದೆ. ಇವರ ನಂತರವೂ ಮೂರುಸಾವಿರಮಠಕ್ಕೆ ೩ ಜನ ಮರಿ ದೇವರಾಗಿದ್ದಾರೆಂದು ತಿಳಿದು ಬರುತ್ತದೆ. ಈಗ ಮೂರುಸಾವಿರಮಠದಲ್ಲಿ ೧೭ ಜಗದ್ಗುರುಗಳ ಗದ್ದುಗೆ ಇರುವವಲ್ಲದೇ, ಧಾರವಾಡದಲ್ಲಿ ೨ ಅದರಗುಂಚಿ ಯಲ್ಲಿ ೨ ಅರಳಿಕಟ್ಟಿಯಲ್ಲಿ ೧ ಈ ತೆರನಾಗಿ ೫ ಗದ್ದಿಗೆಗಳಿದ್ದು, ಒಟ್ಟು ೨೨ ಗದ್ದಿಗೆಗಳು ಈಗಲೂ ಸಹ ನೋಡಲು ಸಿಗುತ್ತವೆ. ಇದರ ಮೇಲಿಂದಲಾದರೂ ಈ ಮಠದ ಪ್ರಾಚೀನತೆಯನ್ನು ಅರಿಯಬಹುದು.

ಹೊಸ ಹುಬ್ಬಳ್ಳಿ ನಿರ್ಮಾಣ ಮಾಡುವ ಕಾಲದಲ್ಲಿ ತೊಂದರೆಯುಂಟಾ ದಾಗ ಅಂದಿನ ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರುಗಳು ಧೈರ್ಯ ಹೇಳಿ ಆಶೀರ್ವದಿಸಿದರೆಂದು ಸಂಯುಕ್ತ ಕರ್ನಾಟಕದ ೧೨-೧೧-೭೧ ದಿನಾಂಕ ದಂದು ಪ್ರಕಟವಾದ ಲೇಖನದಿಂದ ತಿಳಿದುಬರುತ್ತದೆ.

## ಭಕ್ತರ ಇಷ್ಟಾರ್ಥಸಿದ್ಧಿ :

ಮೂರುಸಾವಿರಮಠದ ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಯೋಗ ಸಮಾಧಿಯು ತನ್ನನ್ನು ನಂಬಿದ ಸದ್ಭಕ್ತರಿಗೆ ಉತ್ತರೋತ್ತರ ಕಲ್ಯಾಣವನ್ನು ಕರುಣಿಸಿ, ಅಂದಿನಿಂದ ಇಂದಿನವರೆಗೂ ಕಾಪಾಡುತ್ತಲಿದೆ. ಅವರು ಚಿತ್ ಪ್ರಕಾಶ ಸ್ವರೂಪರಾಗಿ ಸದ್ಭಕ್ತರಿಗೆ ವಿಶ್ವಕಲ್ಯಾಣಕ್ಕೆ ಸನ್ಮಂಗಳಾಶೀರ್ವಾ ದಗಳನ್ನು ಅನುಗ್ರಹಿಸುತ್ತ ಒಳಗಿದ್ದು ಲಿಂಗಾನಂದಲೀನರಾಗಿ, ಇಷ್ಟಾರ್ಥ ಸಿದ್ಧಿಪ್ರದಾಯಕರಾಗಿ ಕಂಗೊಳಿಸುತ್ತಿದ್ದಾರೆ. ಈ ಕರ್ತೃ ಗದ್ದುಗೆ ಅಂದರೆ, ಸಮಾಧಿ ಮಂಟಪವು ಬಹಳ ಬಂಧುರವಾಗಿ ಅಲಂಕೃತವಾಗಿದ್ದರೂ ಭಾವುಕರ ದೃಷ್ಟಿಗೆ ಅದು ಹುಬ್ಬಳ್ಳಿಯ ಹೃದಯವೆನಿಸಿ, ಸಜೀವವಾಗಿರುವಂತೆ, ಸತ್ವ ಪೂರ್ಣವಾಗಿರುವಂತೆ ಎದ್ದು ತೋರುತ್ತದೆ. ಮಠದ ಮುಖ್ಯ ಭಾಗವಾಗಿ ಅಂತಃಶಕ್ತಿಯಂತೆ, ಅವ್ಯಕ್ತ ಮುಕ್ತಿಯಂತೆ ಅಂತರ್ಗತವಾಗಿದೆ. ಈ ಕರ್ತೃ ಗದ್ದುಗೆಗೆ ನಡೆದುಕೊಂಡು, ಬೇಡಿಕೊಂಡು ಸಹಸ್ರಾರು ಜನರು ಇಷ್ಟಾರ್ಥಸಿದ್ಧಿ

ಪಡೆದಿದ್ದಾರೆ; ಪಡೆಯುತ್ತಿದ್ದಾರೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಹೇಳ ಬಯಸುತ್ತೇವೆ. ಗುರುಸಿದ್ಧೇಶ್ವರನ ಹೆಸರಿನಲ್ಲಿ ಆಣೆ ಮಾಡಿ, ಆ ರೀತಿ ನಡೆಯದೆ ಹೋದರೆ, ಹಾನಿಗಳನ್ನು ಅನುಭವಿಸಿದ ಉದಾಹರಣೆಗಳು ಸಾಕ ಷ್ಟಿವೆ. ಕರ್ತೃ ಗದ್ದುಗೆಯಲ್ಲಿ ಅಚಲ ಶ್ರದ್ಧಾಭಕ್ತಿಯಿಟ್ಟವರು, ಮಕ್ಕಳಿಲ್ಲ ದವರು ಮಕ್ಕಳನ್ನು ಪಡೆದಿದ್ದಾರೆ. ರೋಗದಿಂದ ಪೀಡಿತರಾಗಿ ವೈದ್ಯರಿಂದ ಗುಣವಾಗಲಾರದ ಕಣ್ಣುಗಳು ಪೂರ್ಣ ಕಾಣದಂತವರಿಗೂ, ಕಣ್ಣುಗಳು ಮತ್ತೆ ಮೊದಲಿನಂತೆ ಆದ ಘಟನೆಗಳೂ ಸಾಕಷ್ಟಿವೆ. ಸರ್ವಧರ್ಮದ ಲಕ್ಷಾಂತರ ಜನರು ಗುರುಸಿದ್ಧೇಶ್ವರನನ್ನು ಧ್ಯಾನಿಸಿ, ಪುನೀತರಾಗಿದ್ದಾರೆ; ಪುನೀತರಾಗುತ್ತಿದ್ದಾರೆ. ಬೇಡಿದಿಷ್ಟಾರ್ಥಗಳನ್ನು ಪಡೆದು ಆನಂದದಲ್ಲಿ ತಲ್ಲೀ ನರಾಗುತ್ತಿದ್ದಾರೆ. ನಿತ್ಯವೂ ಕರ್ತೃ ಗದ್ದುಗೆಗೆ ಬರುತ್ತಿರುವ ಸಹಸ್ರಾರು ಜನರೇ ಸಾಕ್ಷಿ.

## ಪುತ್ರ ಪ್ರಾಪ್ತಿ:

(೧)

ಒಂದು ನೂರು ವರ್ಷಗಳ ಪೂರ್ವದಲ್ಲಿ ಧಾರವಾಡದಲ್ಲಿ ತಿರುಮಲ ರಾವ್ ಎಂಬ (ಬ್ರಾಹ್ಮಣರು) ಡಿಸ್ಟ್ರಿಕ್ಟ ಕೋರ್ಟ ಜಡ್ಜ ಸಾಹೇಬರಿದ್ದರು. ಅವರಿಗೆ ಮಕ್ಕಳಿರಲಿಲ್ಲ ಹುಬ್ಬಳ್ಳಿಯ ಮೂರುಸಾವಿರಮಠದ ಕರ್ತೃ ಗುರುಸಿದ್ಧೇಶ್ವರರ ಗದ್ದುಗೆಗೆ ಮೊರೆಹೊಕ್ಕರು ಭಕ್ತಿಯಿಂದ ಪ್ರಾರ್ಥಿಸಿ ಕೊಂಡರು ಜಗದ್ಗುರು ಗುರುಸಿದ್ಧೇಶ್ವರರ ಕೃಪೆಯಿಂದ ಅವರಿಗೆ ಸಂತಾನ ಪ್ರಾಪ್ತಿಯಾಯಿತು. ಪುತ್ರಪ್ರಾಪ್ತಿಯಾದ ನಂತರ ಮಹದಾನಂದದಿಂದ ಗುರುಸಿದ್ಧೇಶ್ವರರನ್ನು ಕೊಂಡಾಡುತ್ತಾ ತಮ್ಮ ಅಲ್ಪ ಸೇವೆಯೆಂದು ಆಗ ತಾನೇ ಜೀರ್ಣೋದ್ಧಾರವಾಗುತ್ತಿದ್ದ ಮಠದ ಕಟ್ಟಡಕ್ಕೆ ಮೊದಲಿನ ಪುರಾತನ ಕಂಭಗಳನ್ನು ಹೋಲುವ ಅದೇ ಮಾಟದ ಅದೇ ಎತ್ತರದ ನಾಲ್ಕು ಬೃಹದಾ ಕಾರದ ತೇಗಿನಮರದ ಕಂಭಗಳನ್ನು ಮಾಡಿಸಿಕೊಟ್ಟರು. ಈಗ ಮೂರುಸಾವಿರ ಮಠದ ಹಳೆಯ ಕಟ್ಟಡದ ಮುಂಭಾಗದಲ್ಲಿರುವ ನಾಲ್ಕುಕಂಭಗಳೇ ಅವುಗಳು. ಇನ್ನೂ ವರೆಗೆ ಮಠಕ್ಕೆ ಬರುವ ಭಕ್ತಾದಿಗಳಿಗೆ, ಜಗದ್ಗುರು ಗುರುಸಿದ್ಧೇಶ್ವರರ

ಕರ್ತೃ ಗದ್ದುಗೆಯ ಮಹಾಶಕ್ತಿಗೆ ಸಾಕ್ಷಿಗಳಾಗಿ ನಿಂತಿವೆ. ಈ ನಾಲ್ಕು ಕಂಭಗಳನ್ನು ಜಡ್ಜ ಸಾಹೇಬರೇ ಮಾಡಿಸಿದವರು ಎಂಬುದಕ್ಕೆ ಧಾರವಾಡದ ಅವರ ಮನೆಯಲ್ಲಿ ಅದೇ ಸಮಯದಲ್ಲಿ ಅದೇ ಬಡಿಗರ ಕೈಯ್ಯಿಂದ ಅದೇ ಮಾದರಿಯ ಕಂಭಗಳಿಂದ ಕಟ್ಟಿರುವ ಮನೆಯ ಕಂಭಗಳೇ ಸಾಕ್ಷಿ.

( ೨ )

ಅಕ್ಕಿ ಶಿವರುದ್ರಪ್ಪನವರೆಂಬುವವರು ಹುಬ್ಬಳ್ಳಿ ಪ್ರಸಿದ್ಧ ವ್ಯಾಪಾರಸ್ಥರು ಸುಶೀಲರು 'ಸತಿ-ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಈ ತೆರನಾಗಿ ಜೀವನ ಸಾಗಿಸುತ್ತ ಪೀಠದ ಅಭಿಮಾನಿಗಳಾಗಿ ಇದ್ದು, ಅವರಿಗೆ ಸಂತಾನವಿಲ್ಲದ್ದಕ್ಕೆ ತುಂಬಾ ದುಃಖಪಡುತ್ತಿದ್ದರು. ಒಂದು ದಿನ ಲಿಂಗೈಕ್ಯ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರ ಹತ್ತಿರ ಬಂದು, ತಮಗೆ ಮಕ್ಕಳಿಲ್ಲದ ನೋವನ್ನು ಸನ್ನಿಧಿಗೆ ಅರಿಕೆ ಮಾಡಿಕೊಂಡರು. ಲಗ್ನವಾಗಿ ೭-೮ ವರ್ಷಗಳಾದರೂ ನಮಗೆ ಮಕ್ಕಳಿಲ್ಲವೆಂದು ಕೇಳಿಕೊಂಡರು. ಕೂಡಲೇ ಲಿಂ. ಜಗದ್ಗುರುಗಳು ಸತಿ-ಪತಿಗಳೀರ್ವರೂ ಮನಃಪೂರ್ವಕವಾಗಿ ಕರ್ತೃ ಗದ್ದುಗೆಗೆ ನಡೆದುಕೊಂಡು ಬೇಡಿಕೊಳ್ಳಿರಿ ಅವಶ್ಯವಾಗಿ ನಿಮಗೆ ಪುತ್ರ ಪ್ರಾಪ್ತಿಯಾಗುವದು ಎಂದು ಅಪ್ಪಣೆ ಕೊಡಿಸಿದರು. ಅದೇ ಪ್ರಕಾರ ಅಕ್ಕಿ ಶಿವರುದ್ರಪ್ಪನವರು ಹಾಗು ಅವರ ಪತ್ನಿ ಶ್ರೀ ಅಕ್ಕಮಹಾದೇವಿ ಇವರು ಭಯ-ಭಕ್ತಿಯಿಂದ ನಡೆದುಕೊಂಡು ವರ್ಷ ತುಂಬುವದರೊಳಗಾಗಿ ಗರ್ಭ ಧಾರಣೆಯಾಗಿ ಗಂಡುಮಗುವನ್ನು ಪಡೆದರು.ಗುರುಸಿದ್ಧೇಶ್ವರನ ಕೃಪೆಯಿಂದ ಮಕ್ಕಳಾಗಿದ್ದಕ್ಕೆ ಸಂತೋಷಭರಿತರಾದರು. ಅಂದಿನಿಂದ ಅವರು ಗುರುಸಿದ್ಧೇಶ್ವರನ ನಿಕಟ ಭಕ್ತರಾಗಿ ಸೇವೆಮಾಡುತ್ತ ವ್ಯಾಪಾರೋದ್ಯಮದಲ್ಲಿ ಮುಂದುವರಿದವರಾಗಿದ್ದಾರೆ. ಮೂರುಸಾವಿರಮಠದ ಆವರಣದಲ್ಲಿ ಕಟ್ಟಿಸಲಾದ ಅಕ್ಕಿ ಉಳುವಪ್ಪ ವಿದ್ಯಾರ್ಥಿನಿಲಯಕ್ಕೆ ಉದಾರ ಸಹಾಯ ನೀಡಿದ್ದಾರೆ.

( ೩ )

ಬಿಡನಾಳದ ಅಸುಂಡಿ ಚನಮಲ್ಲಪ್ಪನವರು ಮೊದಲಿಗೆ ತುಂಬಾ ಬಡವರು, ಕಾಯಕನಿಷ್ಠರು, ಬಡತನದ ಬವಣೆಯಲ್ಲಿ ನೊಂದುಬೆಂದವರು.

ಅಂದು ಕೇವಲ ಆರು ದುಡ್ಡಿಗೆ ದಿನಗೂಲಿ ಮಾಡಿ ಹೊಟ್ಟೆತುಂಬಿಸಿಕೊಳ್ಳು-ತ್ತಿದ್ದರು. ಜೀವನೋಪಾಯಕ್ಕೆ ಕಷ್ಟ ಬಂದೊದಗಿದಾಗ, ಲಿಂ. ಜಗದ್ಗು-ರುಗಳನ್ನು ಮೊರೆಹೊಕ್ಕರು. ಲಿಂ. ಜಗದ್ಗುರುಗಳು ಕರ್ತೃ ಗದ್ದುಗೆಯಲ್ಲಿ ಅಪಾರ ವಿಶ್ವಾಸವಿಟ್ಟು ನಡೆದುಕೊಳ್ಳಿರಿ; ನಿಮ್ಮ ಕಷ್ಟ ಪರಿಹಾರವಾಗುವ ದೆಂದು ಅಪ್ಪಣೆ ಕೊಡಿಸಿದರು. ಆ ರೀತಿ ಪ್ರತಿನಿತ್ಯವೂ ಕರ್ತೃ ಗದ್ದುಗೆಗೆ ನಡೆದುಕೊಳ್ಳಹತ್ತಿದರು. ದಿನಗಳು ಗತಿಸಿದಂತೆ ಸುಖ ಪ್ರಾಪ್ತಿಯಾಗಲು ಹತ್ತಿತು. ಬೇರೆಯವರ ಹೊಲಕ್ಕೆ ಹೋಗಿ ದುಡಿದು ತಮ್ಮ ಕಷ್ಟನಿವಾರಣೆ ಮಾಡಿಕೊಳ್ಳುತ್ತಿದ್ದರು. ಕಾಯಕವೇ ಕೈಲಾಸ ಎಂಬ ವಾಕ್ಯದಂತೆ ಸೋಮಾರಿಗಳಾಗದೆ ಮನಮುಟ್ಟಿ ದುಡಿಯಲು ಪ್ರಾರಂಭಿಸಿದರು. ಅದರಿಂದ ಅವರ ಮನೆತನ ಸುಧಾರಿಸಹತ್ತಿತು. ನಿಧಾನವಾಗಿ ಸ್ವಂತ ಹೊಲ ಮಾಡಿ ಕೊಂಡರು. ಏನೇ ಕಾರ್ಯ ಮಾಡಬೇಕಾದರೂ ಕರ್ತೃ ಸಮಾಧಿಗೆ ಬರದೆ, ಬೇಡಿಕೊಳ್ಳದೆ ಮುಂದೆ ಸಾಗುತ್ತಿದ್ದಿಲ್ಲ. ಹೊಲದಲ್ಲಿ ಗದ್ದುಗೆಯ ಅಂಗಾರ ಸಿಂಪಡಿಸಿ, ಕೆಲಸ ಮಾಡುತ್ತಿದ್ದರು. ಇದರ ಫಲವಾಗಿ ಭೂದೇವಿ ಸಾಕಷ್ಟು ಧಾನ್ಯವನ್ನು ಕೊಡಲು ಹತ್ತಿದಳು. ಇವರ ಅಪಾರ ಭಕ್ತಿಗೆ ಮೆಚ್ಚಿ ಗುರು ಸಿದ್ಧೇಶನು ಮೇಲಕ್ಕೆತ್ತಿಕೊಂಡನು. ದೊಡ್ಡ ಶಿರಿವಂತನನ್ನಾಗಿ, ಲಕ್ಷಾಧೀಶ-ನನ್ನಾಗಿ ಮಾಡಿದನು. ಲಕ್ಷಾಧೀಶರಾದರೂ ಅಹಂಕಾರ, ದುರ್ವ್ಯಸನಗಳು ಎಂದಿಗೂ ಅವರ ಹತ್ತಿರ ಬರಲಿಲ್ಲ. ಮತ್ತು ದಾನ-ಧರ್ಮದಲ್ಲಿ ಕೊಡುಗೈ ದೊರೆಗಳಾಗಿ, ಹುಬ್ಬಳ್ಳಿ ತಾಲೂಕಿನ ಅಚ್ಚುಮೆಚ್ಚಿನ ರೈತರಾದರು; ನೇಗಿಲ ಯೋಗಿಗಳಾದರು. ಇವರು ಮಠದ ಕಲ್ಯಾಣ ಮಂಟಪವನ್ನು ಕಟ್ಟಿಸಿಕೊಟ್ಟಿ ದ್ದಾರೆ. ಮಹಾದ್ವಾರಕ್ಕೆ ಲಕ್ಷಾಂತರ ಹಣವನ್ನು ನೀಡಿದ್ದಾರೆ. ಇವರು ಈಗ ಲಿಂಗೈಕ್ಯರಾಗಿದ್ದಾರೆ. ಇವರಿಗೆ ಗುರುಸಿದ್ಧೇಶ ಅಂದರೆ ಪಂಚಪ್ರಾಣ. ಇವರಿಗೆ ಮಕ್ಕಳ ಸಂಪತ್ತು ಚನ್ನಾಗಿದೆ. ಇವರಿಗೆ ವಿರುಪಾಕ್ಷಪ್ಪ, ಶೇಖರಪ್ಪ ಮಲ್ಲೇಶಪ್ಪ ಈ ಮೂವರು ಗಂಡುಮಕ್ಕಳಿದ್ದಾರೆ. ಮೂವರಿಗೂ ತನ್ನಂತೆಯೇ ದುಡಿಯಲು ಕಲಿಸಿ, ಅವರನ್ನು ಲಕ್ಷಾಧೀಶರನ್ನಾಗಿ ಮಾಡಿದ್ದಾರೆ. ಯಾರ ಗೋಜಿಗೂ ಹೋಗದೆ ತಾವಾಯ್ತು, ತಮ್ಮ ಬಾಳಾಯ್ತು. ಗುರುಸಿದ್ಧೇಶನ ಧ್ಯಾನ ಇವುಗಳನ್ನು ಚನ್ನಾಗಿ ನಡೆಸಿಕೊಂಡು ಬಂದಿರುವದರಿಂದಲೇ ಈಗೂ ಸಹ ಸುಖ-ಸಂತೋಷದಲ್ಲಿ ನಲಿಯುತ್ತಿದ್ದಾರೆ. ಗುರುಸಿದ್ಧೇಶ್ವರನ ಪಾದೋ

ದಕವೇ ನಮ್ಮ ಮನೆತನಕ್ಕೆ ದಿವ್ಯೌಷಧ ಎಂದು ಅಸುಂಡಿ ಚನ್ನಮಲ್ಲಪ್ಪನವರು ಹೇಳುತ್ತಾರೆ.

( ೪ )

ನಿಲುಗಲ್ಲ ಸಂಗಪ್ಪನವರು ಆಗರ್ಭಶ್ರೀಮಂತರು, ಹುಬ್ಬಳ್ಳಿಯ ಟೆಂಗಿನ ಕಾಯಿಯ ವ್ಯಾಪಾರಸ್ಥರು, ತಮ್ಮ ಉದ್ಯೋಗದಲ್ಲಿ ಸದಾ ನಿರತರು ಕರ್ತೃ ಗದ್ದುಗೆಗೆ ಪ್ರಭಾವಿತರಾಗಿ ದಾನ-ಧರ್ಮದಲ್ಲಿ ಮುಂದಾಗಿದ್ದಾರೆ. ಮೂರು ಸಾವಿರ ಮಠದ ದೊಡ್ಡ ಗಡಿಯಾರವು ಹುಬ್ಬಳ್ಳಿಯಲ್ಲಿ ಶೋಭಿಸುತ್ತಿರುವುದು ಇವರ ದಾನದ ಪ್ರತೀಕ. ಬಡಹುಡುಗರಿಗೆ, ವಿದ್ಯಾಸಂಸ್ಥೆಗಳಿಗೆ ಅನೇಕ ರೀತಿಯಿಂದ ಸಹಾಯ ಸಲ್ಲಿಸಿ ಕೀರ್ತಿ ಪಡೆದಿದ್ದಾರೆ. ನಾಡಿನಲ್ಲಿ ಬರಗಾಲಬಿದ್ದಾಗ ಸಾಕಷ್ಟು ಧನ-ಧಾನ್ಯ ನೀಡಿ ಬಡ-ಬಂಧುವಾಗಿದ್ದಾರೆ.

( ೫ )

ಹುಬ್ಬಳ್ಳಿಯ ನಿವಾಸಿಗಳಾದ ಶಿವಪ್ಪ ಹುಚ್ಚಪ್ಪ ಬೀಳಗಿ ಇವರ ಮಗಳ ದೊಡ್ಡ ಕಾರಣವು (ಸಕ್ಕರೆ ಕಾರಣ) ರಾಮದುರ್ಗದಲ್ಲಿ ಜರುಗುವದಿತ್ತು ಅದಕ್ಕಾಗಿ ಬಂಧು-ಬಳಗ-ಮಿತ್ರ ಪರಿವಾರದೊಂದಿಗೆ ಹೊರಟರು. ಹೀಗೆ ಹೊರಟವರ ಪೈಕಿ ಶಿವರುದ್ರಪ್ಪಾ ಚೆನ್ನಪ್ಪಾ ಕಿನ್ನಾಳ ಹಾಗೂ ಅವರ ಚಿರಂಜೀವಿ ಗುರಪ್ಪಾ ಕಿನ್ನಾಳ ಮತ್ತು ವಿರುಪಾಕ್ಷಪ್ಪಾ ಹಿಪ್ಪರಗಿ ಎಂಬುವವರೂ ಇದ್ದರು. ಈ ವಿರುಪಾಕ್ಷಪ್ಪಾ ಹಿಪ್ಪರಗಿಯವರು ಮಹಾ ನಿರ್ದಾಕ್ಷಿಣ್ಯ ಸ್ವಭಾವದವರು, ಯಾರಿಗೂ ಸೊಪ್ಪುಹಾಕುವವರಲ್ಲ, ಎಂಥಹ ಪ್ರಸಂಗ ಬಂದರೂ ಯಾರಿಗೂ ಒಂದು ನಯಾಪೈಸೆ ಕೊಟ್ಟವರಲ್ಲ. ಇಂಥಹವರು ಇವರು ಎಂಬುದು ಗುರುಸಿದ್ಧೇಶ್ವರರಿಗೆ ಗೊತ್ತಿತ್ತು. ಇವರ ಗಂಟು ಬಿಚ್ಚಿಸಬೇಕೆಂದು ಗುರುಸಿದ್ಧೇಶ್ವರ ದಾರಿ ಕಾಯುತ್ತಿದ್ದ. ನೂಲ ಹುಣ್ಣಿಮಿಯ ದಿವಸ ರಾಮದುರ್ಗಕ್ಕೆ ಬಂದು ಮುಟ್ಟಿದರು. ಮಲಪ್ರಭಾನದಿಗೆ ಎಲ್ಲರೂ ಸ್ನಾನ ಮಾಡಲು ಹೋದರು. ವಿರುಪಾಕ್ಷಪ್ಪಾ ಹಿಪ್ಪರಗಿಯವರು ಈಜಲು (ನದಿಯಲ್ಲಿ) ಹೋದರು. ಪ್ರವಾಹ ಜಾಸ್ತಿಯಾಗಿದ್ದುದರಿಂದ ಎಲ್ಲರೂ ಬೇಡವೆಂದರು. ಯಾರು ಹೇಳಿದರೂ ಕೇಳದೆ ಈಜುತ್ತಾ ಬಹಳ ದೂರ ಹೋದರು. ಆಗ ಒಂದು ದೊಡ್ಡ ಸೆಳವು ಬಂದು ಇವರನ್ನು ಸೆಳೆದುಕೊಂಡು

ಹೋಗಿ ಪೂಲಿನಲ್ಲಿ ಹೋಗಿ ಮುಳುಗಿಸಿತು. ಪೂರ್ತಿ ಮುಳುಗಿದರು ಕೈಮಾತ್ರ ಮೇಲೆ ಕಾಣಿಸುತ್ತಿದ್ದವು. ಎರಡುಬಾರಿ ಮೇಲೆ ಬಂದು, ಮೂರನೇ ಬಾರಿ ಮುಳುಗಿಸುವಾಗ ಅವರಿಗೆ ಏನು ಬುದ್ಧಿ ಬಂದಿತೋ ಏನೋ ? ಎಂದೂ ಯಾವ ದೇವರನ್ನೂ, ಯಾವ ಸ್ವಾಮಿಯನ್ನೂ, ನೆನಸದವರು ಅಂದು ಆ ಸಂಕಟ ಸಮಯದಲ್ಲಿ ಗುರುಸಿದ್ಧೇಶಾ, ಗುರುಸಿದ್ಧೇಶ್ವರಾ ಎಂದು ಕೂಗಿ ಕೊಂಡರು. ತತ್‌ಕ್ಷಣ ಯಾರೋ ಬಂದು ಅವರನ್ನು ಎಳೆದು ಎತ್ತಿಕೊಂಡು ಬಂದು ದಂಡೆಗೆ ತಂದು ಬಿಟ್ಟಂತಾಯಿತು. ಕಣ್ಣು ತೆರೆದು ಸುಧಾರಿಸಿಕೊಂಡು ನೋಡುವಷ್ಟರಲ್ಲಿ ಅಲ್ಲಿ ಯಾರೂ ಇಲ್ಲ. ತಮ್ಮ ಸಂಗಡಿಗರಿರುವ ಸ್ಥಳಕ್ಕೂ ಇವರಿಗೂ ಬಹಳ ದೂರವಿದ್ದಿತು. ಆಗ ಅವರಿಗೆ ಗುರುಸಿದ್ಧೇಶ್ವರರ ಮಹಿಮೆ ಅರಿವಾಗಿ ಹುಬ್ಬಳ್ಳಿಗೆ ಬಂದು ಮೊದಲು ಮಠಕ್ಕೆ ಹೋಗಿ ಕರ್ತೃ ಗದ್ದುಗೆ ದರ್ಶನ ಪಡೆದು, ಪೂಜಾ ಸೇವೆ ಸಲ್ಲಿಸಿ, ತಮ್ಮ ಮನೆಗೆ ಕರೆದುಕೊಂಡು ಹೋಗಿ ಮನೆಯಲ್ಲಿ ದೊಡ್ಡ ಪೆಂಡಾಲ ಹಾಕಿಸಿ, ಬಹಳ ಚೆನ್ನಾಗಿ ಅಲಂಕಾರ ಮಾಡಿ, ಜಗದ್ಗುರುಗಳವರ ಪಾದಪೂಜಾ ಮಾಡಿಸಿ, ತಮ್ಮ ಬಂಧು-ಬಳಗ-ದವರನ್ನೂ, ಮಿತ್ರರನ್ನೂ ಕರೆಸಿಕೊಂಡು ಅವರ ಸಮಕ್ಷದಲ್ಲಿ ಜಗದ್ಗುರುಗಳವರ ಪಾದಕ್ಕೆ ಐದು ಸಾವಿರದ ಒಂದು ರೂಪಾಯಿಗಳ ಕಾಣಿಕೆ ಸಮರ್ಪಿಸಿದರು. ಇದನ್ನು ಸ್ವತಃ ಕಂಡ ಪ್ರತ್ಯಕ್ಷದರ್ಶಿಗಳಾದ ಶ್ರೀ ಶಿವರುದ್ರಪ್ಪ ಕಿನ್ನಾಳ ಮೊದಲಾದ ಸದ್ಗೃಹಸ್ಥರು ಹುಬ್ಬಳ್ಳಿಯಲ್ಲಿ ಇನ್ನೂ ಇದ್ದಾರೆ.

( ೬ )

## ಪಾದೋದಕ ಮಹತ್ವ :

ಬಿ. ಎಚ್. ಪಾಟೀಲ ಚಿಕ್ಕಮಲ್ಲೂರ ಎಂಬವರ ಧರ್ಮಪತ್ನಿಯವರಿಗೆ ಒಂದು ತರದ ಕಾಯಿಲೆಯಾಗಿತ್ತು. ಅದು ಬರಬರುತ್ತ ಉಲ್ಬಣಗೊಂಡು ಸಾವು-ಉಳಿವಿನ ಪ್ರಶ್ನೆಯಾಯಿತು. ಒಬ್ಬ ಡಾಕ್ಟರರ ಸಲಹೆಯಂತೆ ಆಪರೇಶನ್ ಇಲ್ಲದೆ ಬದುಕುವುದಿಲ್ಲ (ಬದುಕುವುದು ಸಾಧ್ಯವಿಲ್ಲೆಂದು) ಆಪರೇಶನ್‌ಗಾಗಿ ಆಪರೇಷನ್ ತಜ್ಞರಾದ ಡಾಕ್ಟರರ ಕಡೆಗೆ ಕರೆದುಕೊಂಡು ಹೋದರು. ಆ ತಜ್ಞರು ಮತ್ತೆ ಚನ್ನಾಗಿ ಪರೀಕ್ಷಿಸಿ ಇವರ ಪ್ರಕೃತಿ ವಿಚಿತ್ರವಾಗಿದೆ.

ಆಪರೇಶನ್ ಆಗದ ವಿನಃ ಪ್ರಾಣಾಪಾಯ ತಪ್ಪಿದ್ದಲ್ಲ ಆದರೆ ಆಪರೇಶನ ಆದರೆ ಒಳ್ಳೇದು ಆಗುವುದಿಲ್ಲ. ಅಂದರೆ ಆಪರೇಷನ್ ಆದರೂ ಬದುಕುವುದಿಲ್ಲವೆಂದು ಡಾಕ್ಟರರು ಖಡಾಖಂಡಿತವಾಗಿ ಹೇಳಿಬಿಟ್ಟರು. ಬಿ. ಎಚ್. ಪಾಟೀಲರಿಗೆ ದಿಕ್ಕು ತೋಚದಂತಾಯಿತು, ಆದರೂ ಅವರು ಪ್ರಯತ್ನ ಬಿಡಲಿಲ್ಲ. ಏನಾದರೂ ಮಾಡಿ ಹೆಂಡತಿಯ ಪ್ರಾಣವನ್ನು ಉಳಿಸಿಕೊಳ್ಳಬೇಕೆಂದು ದೃಢ ಸಂಕಲ್ಪ ಮಾಡಿ ತಮ್ಮ ಆರಾಧ್ಯ ದೇವತೆಯಾದ ಹುಬ್ಬಳ್ಳಿಯ ಮೂರುಸಾವಿರಮಠದ ಗುರುಸಿದ್ಧೇಶ್ವರರ ಕರ್ತೃ ಗದ್ದುಗೆಗೆ ಬಂದು ಸಾಷ್ಟಾಂಗ ನಮಸ್ಕಾರ ಮಾಡಿ ಸೇವೆಸಲ್ಲಿಸಿ ಈಗಿನ ಜಗದ್ಗುರುಗಳವರ ದರ್ಶನಕ್ಕೆ ಬಂದು ದರ್ಶನ ಪಡೆದು ನಮಸ್ಕರಿಸಿ ಜಗದ್ಗುರುಗಳವರ ಮುಂದೆ ತಮ್ಮ ದುಃಖವನ್ನು ತೋಡಿಕೊಂಡು ಗಳಗಳ ಅತ್ತರು. ಆಗ ಜಗದ್ಗುರು ಮಹಾಸನ್ನಿಧಿಯವರು ಎರಡು ನಿಮಿಷಗಳ ವರೆಗೆ ಮೌನದಿಂದಿದ್ದು ಅವರನ್ನು ಸಮಾಧಾನಪಡಿಸಿ ಕರ್ತೃ ಗದ್ದುಗೆಯ ಪಾದೋದಕ ಕೊಟ್ಟು ಆಶೀರ್ವದಿಸಿ, ಧೈರ್ಯದಿಂದ ಆಪರೇಷನ್ ಮಾಡಿಸಿಕೊಳ್ಳಲು ಅಪ್ಪಣೆ ಮಾಡಿದರು. ಮಹಾಸನ್ನಿಧಿಯವರ ಅಪ್ಪಣೆಯಂತೆ ಅವರು ಪಾದೋದಕ ಕೊಟ್ಟು ಆಪರೇಷನ್ ಮಾಡಿಸಿದರು. ಆಪರೇಷನ್ ಆಯಿತು. ಆ ತಾಯಿ ಬದುಕಿ ಆರೋಗ್ಯವಂತಳಾದಳು. ಆಗ ಬಿ. ಎಚ್. ಪಾಟೀಲರು ಸಂತೋಷದಿಂದ ದಂಪತಿ ಸಮೇತರಾಗಿ ಮಠಕ್ಕೆ ಬಂದು ಪೂಜಾ ಸೇವಾ ಸಲ್ಲಿಸಿ ಜಗದ್ಗುರು ಮಹಾಸನ್ನಿಧಿಯವರ ಪಾದಕ್ಕೆ ಹನ್ನೊಂದುನೂರು ರೂಪಾಯಿಗಳ ಕಾಣಿಕೆಯನ್ನು ಅರ್ಪಿಸಿದರು.

( ೭ )

# ಹೆಸರು ಹೇಳಿ ಯಮನನ್ನು ಸೋಲಿಸಿದಃ

ಹುಬ್ಬಳ್ಳಿಯ ಗಣೇಶ ಪೇಟೆಯಲ್ಲಿರುವ ಗುರುಸಿದ್ಧಪ್ಪ ಸುಳ್ಳದ ಎಂಬ ಸುಪ್ರಸಿದ್ಧ ಗೃಹಸ್ಥರಿಗೆ ಅಕಸ್ಮಾತ್ ಒಂದು ಖಟ್ಲೆಯಲ್ಲಿ ಫಾಸಿ ಶಿಕ್ಷೆಯಾಗಿತ್ತು. ಅವರನ್ನು ಕೋರ್ಟಿಗೆ ಕರೆದೊಯ್ಯುವ ಮುನ್ನ ಅವರು ಮೂರು-ಸಾವಿರಮಠದ ಗುರುಸಿದ್ಧೇಶ್ವರರ ಕರ್ತೃ ಗದ್ದುಗೆ ದರ್ಶನಪಡೆದುಕೊಂಡು

ಹೋಗಬೇಕೆನ್ನುವ ತನ್ನ ಸದಿಚ್ಛೆಯನ್ನು ವ್ಯಕ್ತಪಡಿಸಿದರು. ಅವರ ಬೇಡಿಕೆಯನ್ನು ಸರಕಾರದವರು ಮನ್ನಿಸಿ, ಅವರನ್ನು ಮಠಕ್ಕೆ ಕರೆದುಕೊಂಡು ಹೋಗಲು ಅನುಮತಿಯಿತ್ತರು. ಆಗ ಗುರುಸಿದ್ಧಪ್ಪ ಸುಳ್ಳದವರು ಮಠಕ್ಕೆ ಬಂದು ಗದ್ದುಗೆ ಮುಂದೆ ನಿಂತು ಭಯಭಕ್ತಿಗಳಿಂದ "ತಂದೇ ಗುರು ಸಿದ್ಧೇಶ್ವರಾ ನನ್ನ ಕೈಬಿಡಬೇಡಪ್ಪ ನೀನು ನನ್ನ ಮತ್ತು ನಮ್ಮ ಮನೆತನದ ಆರಾಧ್ಯದೇವತೆಯಾಗಿರುವೆ. ನನ್ನನ್ನು ಹಡೆದವರು ನನಗೆ ನಿನ್ನ ಹೆಸರಿಟ್ಟಿರುವರು. ಆದುದರಿಂದ ನಾನು ಮಹಾಪಾಪಿಯಾಗಿರಬಹುದು. ಆದರೆ ನಿನ್ನ ಹೆಸರಿಗಾದರೂ ಧಕ್ಕೆ ಬರದಂತೆ ನನ್ನನ್ನು ನೀನು ಕಾಪಾಡಿದರೆ ಮಾತ್ರ ನೀನು ಖರೇ ಖರೇ ಗುರುಸಿದ್ಧೇಶ್ವರ ಹೌದು, ಜಗದ್ಗುರು ಹೌದು" ಎಂದು ಆವೇಶದಿಂದ ನುಡಿದು ಬೇಡಿಕೊಂಡು ಹೋದ. ಗುರುಸಿದ್ಧೇಶ್ವರರ ಕೃಪೆಯಿಂದ ಮುಂದೆ ವಿಚಾರಣೆಯಾಗಿ ಅವರ ಫಾಸಿ ಶಿಕ್ಷೆ ರದ್ದಾಯಿತು. ಅವರಿಗೆ ಯಾವ ಶಿಕ್ಷೆಯೂ ಆಗಲಿಲ್ಲ.ಆಗ ಗುರುಸಿದ್ಧಪ್ಪ ಸುಳ್ಳದವರು ಮಠಕ್ಕೆಬಂದು ಕತ್ರ್ಯ ಗದ್ದುಗೆ ದರ್ಶನಪಡೆದುಕೊಂಡು ಜಗದ್ಗುರು ಮಹಾಸನ್ನಿಧಿಯವರ ಪಾದಕ್ಕೆ ಹತ್ತುಸಾವಿರ ರೂಪಾಯಿಗಳ ಕಾಣಿಕೆಯನ್ನರ್ಪಿಸಿದರು. ಅದೇ ಹಣದಿಂದ ಜಗದ್ಗುರು ಮಹಾಸನ್ನಿಧಿಯವರು ಲೈಬ್ರರಿ ಕಟ್ಟಡವನ್ನು ಕಟ್ಟಿಸಿದರು. ಅದೇ ಈಗ ನಾವು ಮೂರುಸಾವಿರಮಠದಲ್ಲಿ ಕಾಣುತ್ತಿರುವ ಲೈಬ್ರರಿ. ಹೀಗೆ ಗುರುಸಿದ್ಧೇಶ್ವರನ ಹೆಸರು ಹೇಳಿದರೆ ಯಮನು ಸಹಾ ಅಂಜಿ ಓಡುತ್ತಾನೆ.

ಕತ್ರ್ಯ ಗುರುಸಿದ್ಧೇಶ್ವರನ ಗದ್ದುಗೆಗೆ ನಡೆದುಕೊಂಡು, ಪುನೀತರಾಗಿ, ಇಷ್ಟಾರ್ಥ ಸಿದ್ಧಿಪಡೆದವರು ಸಹಸ್ರಾರು ಜನರು. ನಿತ್ಯವೂ ಇಂದಿಗೂ ಹಾಗೆಯೇ ನಡೆದಿದೆ. ಒಂದಾನೊಂದು ದಿನ ಇಂದಿನ ಜಗದ್ಗುರುಗಳು, ಹಾಗೂ ನಾಗನೂರಿನ ಸ್ವಾಮಿಗಳು ಮೂರುಸಾವಿರ ಮಠದಲ್ಲಿ ಮಾತನಾಡುತ್ತ ಕುಳಿತಿರುವಾಗ, ಲೇಖಕನೂ ಅವರ ಬಳಿಯಲ್ಲಿಯೇ ಅವರ ವಿಚಾರ ಕೇಳುತ್ತಿರುವಾಗ, ಒಂದು ಆಶ್ಚರ್ಯಕರ ಘಟನೆಯೊಂದು ಜರುಗಿತು.

ಅದು ಇಂತಿದೆ: ೧೯೭೬ನೆಯ ಇಸ್ವಿಯ ಜುಲೈ ತಿಂಗಳಲ್ಲಿ ಒಬ್ಬ ಮುದುಕ ರಾಯನಾಳ ಸಮೀಪದ ಹಳ್ಳಿಯವನು. ಅವನು ತನ್ನ ಮಗನನ್ನು

ಕರೆದುಕೊಂಡು ಬಂದು ಜಗದ್ಗುರುಗಳಿಗೆ ನಮಸ್ಕಾರ ಮಾಡಿ, ಈ ರೀತಿ ಹೇಳಿದನು. ಬುದ್ಧಿ, ನನ್ನ ಮಗನಿಗೆ ೫-೬ ವರ್ಷದಿಂದ ಕಣ್ಣಿನ ಬ್ಯಾನೆ ಬಂದು, ಕಣ್ಣು ಕಾಣದಂತಾಗಿ ದುಃಖದಿಂದ ಬಳಲುತ್ತಿರುವಾಗ, ಮುಂಬೈ. ಮಿರ್ಜಿ, ಬೆಂಗಳೂರು, ಮುಂತಾದ ಊರುಗಳಿಗೆ ಹೋಗಿ, ೫-೬ ಸಾವಿರ ರೂಪಾಯಿ ಖರ್ಚು ಮಾಡಿದರೂ ಗುಣವಾಗದೆ ನಿರಾಶನಾಗಿದ್ದಾಗ, ನಮ್ಮ ಹಳ್ಳಿಯ ಪಕ್ಕದವರು ಹುಬ್ಬಳ್ಳಿ ಹುಚ್ಚ ಮೂರುಸಾವಿರ ಗುರುಸಿದ್ಧಪ್ಪನ ಗದ್ದುಗೆಗೆ ನಡೆದುಕೋ. ಪ್ರತಿ ಅಮಾವಾಸ್ಯೆ, ಪ್ರತಿಸೋಮವಾರ ಹೋಗಿ, ಕಣ್ಣಿಗೆ ಅಂಗಾರ ಹಚ್ಚಿಕೋ ಅಂದರೆ ಕಣ್ಣು ಕಾಣುವವು ಎಂದು ಹೇಳಿದಂತೆ ಆ ಪ್ರಕಾರ ಒಂದು ವರ್ಷ ನಡೆದುಕೊಂಡಿದ್ದಕ್ಕೆ ನನ್ನ ಮಗನ ಕಣ್ಣುಗಳು ಮೊದಲಿನಂತೆ ಸ್ವಚ್ಛ ಕಾಣಲಿಕ್ಕೆ ಹತ್ತಿ, ಮನಸ್ಸಿಗೆ ಸಮಾಧಾನವಾಗಿ, ಹೊತ್ತ ಅರಿಕೆಯಂತೆ ಬಂಗಾರ ಕರಡಿಗೆ ಮಠಕ್ಕೆ ಮಾಡಿಸಿಕೊಡುತ್ತೇನೆಂದು ಬೇಡಿಕೊಂಡ ಪ್ರಕಾರ, ಅದನ್ನು ಮುಟ್ಟಿಸಲಿಕ್ಕೆ ಆ ಕರಡಿಗೆಯನ್ನು ತಂದಿರುವೆನು. ತೆಗೆದುಕೊಳ್ಳಿರಿ ಎಂದು ಭಯ-ಭಕ್ತಿಯಿಂದ ನಡಗುತ್ತ ಹೇಳಿದನು. ನಾನು ಪ್ರತ್ಯಕ್ಷ ಕಂಡು ಬೆರಗಾಗಿ ಆಶ್ಚರ್ಯಚಕಿತನಾದೆ. ಶ್ರೀ ಜಗದ್ಗುರುಗಳು ನಾಗನೂರು ಸ್ವಾಮಿಗಳು ಕರ್ತೃ ಗದ್ದುಗೆಯ ಮಹಿಮೆಯನ್ನು ಬಹು ರೀತಿಯಿಂದ ವರ್ಣಿಸುತ್ತ, ಇಂದಿಗೂ ಇದರ ಪ್ರಭಾವ ಬೆಳೆಯುತ್ತಿರುವದು ಅವರ ತಪಸ್ಸಿನ ಫಲವೆಂದು ಹೇಳಿದರು. ಅಷ್ಟರೊಳಗೆ ಜಗದ್ಗುರುಗಳು ಸಿಪಾಯಿಯನ್ನು ಕರೆಯಿಸಿ, ಆ ಮುದುಕನನ್ನು, ಆ ಹುಡುಗನನ್ನು, ಕರೆಯಲು ತಿಳಿಸಿದ ಪ್ರಕಾರ, ಅವರೀರ್ವರೂ ಎಷ್ಟು ಹುಡುಕಿದರೂ ಸಿಗಲಿಲ್ಲ. ಇದನ್ನು ನಾನು ಪ್ರತ್ಯಕ್ಷ ಕಂಡು ಆನಂದಭರಿತನಾದೆನು.

ಹುಬ್ಬಳ್ಳಿಯ ಹತ್ತಿರ ಇರುವ ಶಿರಗುಪ್ಪಿಯ ಇಬ್ಬರು ಸುಶಿಕ್ಷಿತರು ಹಣದ ವ್ಯವಹಾರದಲ್ಲಿ ತಮ್ಮಲ್ಲಿಯೇ ಸಂಶಯ ಹುಟ್ಟಿಸಿಕೊಂಡು ಅವರಿಬ್ಬರಿಗೂ ಜಗಳ ಪ್ರಾರಂಭವಾಗಿತ್ತು. ಒಬ್ಬರ ಮೇಲೆ ಮತ್ತೊಬ್ಬರು ಸಂಶಯಿತರಾಗಿ, ನೀವು ಕೊಡಬೇಕಾದ ಐದುಸಾವಿರ ರೂಪಾಯಿಗಳನ್ನು ನನಗೆ ತಂದು ಕೊಡಲೇಬೇಕು. ನಿನ್ನ ರೂಪಾಯಿಗಳು ನನ್ನಲ್ಲಿಲ್ಲ. ನಾನು ಕೊಡಲಿಕ್ಕೆ ಸಾಧ್ಯವಿಲ್ಲ. ನೀನುಬೇಕಾದ್ದನ್ನು ಮಾಡಿಕೋ ಎಂದು ಸಿಟ್ಟಿನಿಂದ ಹೇಳಿಬಿಟ್ಟನು. ಅಷ್ಟರಲ್ಲಿ ಮತ್ತೊಬ್ಬನು ಅಲ್ಲಿಯೇ ಬಾಯಿಹಾಕಿ, "ನಿನ್ನಲ್ಲಿ ಅವನ

ದುಡ್ಡು ಇಲ್ಲವೆಂದು ನೀನು ನಿಜವಾಗಿ ಹೇಳುವದಿದ್ದರೆ ಹುಬ್ಬಳ್ಳಿಯ ಮೂರುಸಾವಿರಮಠದ ಕರ್ತೃ ಗದ್ದುಗೆ ಹತ್ತಿರ ಸ್ನಾನ ಮಾಡಿ, ಒದ್ದೆ ಅರಿವೆಯಿಂದ ಹೋಗಿ ಕೈಯಲ್ಲಿ ಅಂಗಾರ ಹಿಡಿದು, ನನ್ನಲ್ಲಿ ಅವನ ದುಡ್ಡು ಇಲ್ಲವೆಂದು, ಗುರುಸಿದ್ಧೇಶ್ವರನ ಆಣೆಮಾಡುತ್ತ, ಕರ್ತೃ ಗದ್ದುಗೆಯನ್ನು ಮುಟ್ಟು" ಎಂದು ಹೇಳಿ ಇಬ್ಬರ ನ್ಯಾಯವನ್ನೂ ಅಲ್ಲಿಯೇ ತೀರಿಸಿ, ಅವರೀರ್ವರನ್ನು ಹುಬ್ಬಳ್ಳಿ ಮೂರುಸಾವಿರಮಠಕ್ಕೆ ಕರೆದುಕೊಂಡು ಬಂದು, ಮೇಲೆ ವಿವರಿಸಿದ ಪ್ರಕಾರ, ಆ ರೀತಿ ಮಾಡಿಸಿದನು. ಸುಳ್ಳು ಹೇಳಿದವನು ಆ ರೀತಿ ಸ್ನಾನಮಾಡಿ ಗುರುಸಿದ್ಧೇಶ್ವರನ ಆಣೆ ಮಾಡಿ, ಕರ್ತೃ ಗುದ್ದುಗೆ ಮುಟ್ಟಿ ಹೊರಬಂದು, ಮಹಾದ್ವಾರ ದಾಟುವದರೊಳಗಾಗಿಯೇ, ಕಾರಿಕೊಂಡು ಅಲ್ಲಿಯೇ ಸತ್ತು ಹೋದನೆಂದು ಲಕ್ಷ್ಮೇಶ್ವರ ಮಠದ ಚನ್ನಯ್ಯನವರು ಈ ರೀತಿ ಹೇಳಿ, ಗದ್ದುಗೆಯ ಮಹಿಮೆ ಅಗಾಧವಾದುದು ಎಂದು ಹೇಳಿದರು. ಸುಳ್ಳಿನ ಆಣೆ ಮಾಡಿ ಹೀಗೆ ಎಷ್ಟೋ ಅನಾಹುತಗಳಾಗಿದ್ದವೆಂದು ಲಿಂಗೈಕ್ಯ ಸೊಲಬಪ್ಪಜ್ಜನವರು ಸಹ ಹೇಳುತ್ತಿದ್ದರು.

ಇಪ್ಪತ್ತು ವರ್ಷಗಳ ಹಿಂದೆ ಇದೇ ಹುಬ್ಬಳ್ಳಿಯ ಗಣ್ಯ ವ್ಯಾಪಾರಸ್ಥರು, ಸರಳ ಜೀವಿಗಳು, ಧರ್ಮಾಭಿಮಾನಿಗಳೂ ಆದ ಈಶ್ವರಪ್ಪ ಗಂಗಾಧರಪ್ಪ ಅಳಗುಂಡಗಿ ಇವರಿಗೆ, ಹೊಟ್ಟೆಯಕಿಚ್ಚಿನಿಂದ ಮಾಟ ಮಾಡಿಸಿದ್ದರು. ಈ ಮಾಟದಿಂದ ಅವರ ಬುದ್ಧಿ ಭ್ರಮೆಯಾಗಿತ್ತು. ಭ್ರಮೆಯಲ್ಲದೆ, ತಲೆ ತುಂಬ ಒಂದು ರೀತಿಯ ಹುಳ ಹರಿದಾಡಿದಂತೆ, ಮೈಯಲ್ಲಿ ಚುಚ್ಚಿದಂತೆ ಆಗುವುದು. ಹೀಗೆ ಕೆಲವು ದಿನಗಳು ಕಳೆದವು ಒಂದು ದಿನ ಹಿಂದಿನ ಜಗದ್ಗುರು ಗುರುಸಿದ್ಧೇಶ್ವರ ಸ್ವಾಮಿಗಳನ್ನು ಭೆಟ್ಟಿಯಾಗಿ ತಮ್ಮ ಪರಿಸ್ಥಿತಿಯನ್ನು ಅರಿಕೆಮಾಡಿಕೊಂಡರು. ತಪ್ಪದೆ ಕರ್ತೃ ಗದ್ದುಗೆಗೆ ನಡೆದುಕೊಳ್ಳಬೇಕು, ಹಾಗೂ ಅಮವಾಸೆಗೊಮ್ಮೆ ನನ್ನನ್ನು ಭೆಟ್ಟಿಯಾಗಬೇಕು ಎಂದು ಅಪ್ಪಣೆ ಮಾಡಿದಂತೆ, ಅವರು ನಡೆದುಕೊಂಡರು. ಮುಂದೆ ಅವರು ಗುಣಮುಖರಾಗಿ, ನಮ್ಮೆಲ್ಲರ ಮಧ್ಯ ಇಗಲೂ ಇರುವರು ಇದೊಂದು ಪ್ರತ್ಯಕ್ಷ ನಿದರ್ಶನ.

# ಲಿಂ.ಶ್ರೀಮಜ್ಜಗದ್ಗುರು ಗಂಗಾಧರರಾಜಯೋಗೀಂದ್ರ ಮಹಾಸ್ವಾಮಿಗಳವರ ಸಂಕ್ಷಿಪ್ತ ಚರಿತ್ರೆ :

(೧೯೦೧)

ಮೂರುಸಾವಿರ ಮಠವು ಮತ್ತೆ ಚೇತರಿಸಿಕೊಂಡು, ಮಠದ ಕೀರ್ತಿ ಬೆಳೆಯುತ್ತಿರುವಷ್ಟರಲ್ಲೇ ಮತ್ತೆ ಕೆಲವು ಕಾಲ ಪೀಠಕ್ಕೆ ಸರಿಯಾದ ವ್ಯವ-ಸ್ಥಾಪಕರಿಲ್ಲದೇ, ಪೀಠಾಧಿಪತಿಗಳ ಅಲಕ್ಷ್ಯತನದಿಂದ ಮತ್ತೆ ಸ್ವಾರ್ಥಪರರಾದ ಕಾರಭಾರಿಗಳ ಕೈಯಲ್ಲಿ ಸಿಕ್ಕು ಮಠದ ಹಿಂದಿನ ಕೀರ್ತಿ ಮರೆಯಾಗುತ್ತಾ ಬಂತು. ಅದೇ ಸಮಯದಲ್ಲಿ ಹುಬ್ಬಳ್ಳಿಯಲ್ಲಿ ಸಿದ್ಧಾರೂಢರು ಬಂದು ವಾಸ್ತವ್ಯ ಮಾಡಿ, ತಮ್ಮ ವೇದಾಂತ ಪಾಂಡಿತ್ಯ ಹಾಗೂ ವೈರಾಗ್ಯ ಎಲ್ಲಕ್ಕೂ ಮಿಗಿಲಾಗಿ ಅದ್ಭುತವಾದ ಪ್ರವಚನ ನಿರೂಪಣಾ ಶೈಲಿಯಿಂದ, ಅಖಂಡ ಭಾರತದಲ್ಲಿ ಹೆಸರುವಾಸಿಯಾಗಿ,ಅಪಾರ ಶಿಷ್ಯಸ್ತೋಮವನ್ನು ಗಳಿಸಿಕೊಂಡು, ಹುಬ್ಬಳ್ಳಿಯಲ್ಲಿ ಒಂದು ಮಠವನ್ನು ಕಟ್ಟಿಸಿ, ಎಲ್ಲರ ಲಕ್ಷ್ಯವನ್ನೂ ಆಕಡೆ ಸೆಳದದ್ದರಿಂದಲೂ, ಅದೇ ಸಮಯದಲ್ಲಿ ಮೂರುಸಾವಿರಮಠಕ್ಕೆ ಯಾರೂ ಅಧಿಕಾರಿಗಳಿಲ್ಲದೆ, ಜಗದ್ಗುರುಗಳಿಲ್ಲದೆ, ಪೀಠವು ಬರಿದಾಗಿದ್ದುದರಿಂದಲೂ, ಮೂರುಸಾವಿರಮಠದ ಆಡಳಿತವು ಅಸ್ತವ್ಯಸ್ತವಾಗಿ, ರಾಹುಬಡಿದಂತಾಗಿತ್ತು. ನೆಪಮಾತ್ರಕ್ಕೆ ಮಠವಾಗಿತ್ತು. ಅಂಥಹ ಪ್ರಸಂಗದಲ್ಲಿ ಸಿದ್ಧಾರೂಢರಲ್ಲಿ ವೇದಾಂತ ಶಾಸ್ತ್ರವನ್ನು ಅಭ್ಯಾಸ ಮಾಡಲು ಬಂದಿದ್ದ, ಹಾನಗಲ್ ಶ್ರೀಗಳವರು (ಆಗ ಇನ್ನೂ ಅವರು ಹಾನಗಲ್ಲಿಗೆ ಅಧಿಕಾರಿಗಳಾಗಿರಲಿಲ್ಲ. ಇನ್ನೂ ಬ್ರಹ್ಮಚಾರಿಗಳಾಗಿ, ಸಾಧಕರಾಗಿದ್ದರು.) ಮೂರುಸಾವಿರಮಠದ ಸಧ್ಯದ ಪರಿಸ್ಥಿತಿ ಕಂಡು, ಹಿಂದಿನ ಅದರ ಭವ್ಯ ಪರಂಪರೆಯನ್ನು ಸ್ಮರಿಸಿಕೊಂಡು ಮರಮರ ಮರುಗಿದರು.

ಮೂರುಸಾವಿರಮಠದ ಹಿಂದಿನ ವೈಭವವನ್ನೂ, ಅದರ ಭವ್ಯ ಪರಂಪರೆಯನ್ನೂ ಸ್ಮರಿಸಿ ಮನನೊಂದುಕೊಂಡ ಶ್ರೀಗಳವರಿಗೆ ಸಮಾಧಾನವಾಗಲಿಲ್ಲ. ಈ ಪವಿತ್ರ ಸ್ಥಾನವು ಈ ರೀತಿ ಕ್ಷೀಣಾವಸ್ಥೆಗೆ ಬಂದ ಕಾರಣವನ್ನು ತರ್ಕಿಸಿ ಮೊದಲು ಈ ಪೀಠಕ್ಕೆ ಯೋಗ್ಯರಾದ, ದಕ್ಷರಾದ ಹಾಗೂ ಸಕಲ ಶಾಸ್ತ್ರ

ಪಾರಂಗತರಾದ. ಆಚಾರ ನಿಷ್ಠರಾದ ಓರ್ವ ಮಹಾಸ್ವಾಮಿಗಳವರನ್ನು ಕರೆತಂದು, ಅಧಿಕಾರ ವಹಿಸಿಕೊಟ್ಟು ಹಿಂದಿನ ವೈಭವವನ್ನೂ, ಕೀರ್ತಿಯನ್ನೂ ಮತ್ತೆ ಕಾಣಬೇಕೆಂಬ ಪಣತೊಟ್ಟು, ದೇಶಿಕರಾಗಿ ಮುಂದೆ ಹಾನಗಲ್ ವಿರಕ್ತಮಠದ ಅಧಿಕಾರವಹಿಸಿಕೊಂಡ ಕೂಡಲೇ ಮೂರುಸಾವಿರಮಠಕ್ಕೆ ಯೋಗ್ಯರಾದ, ಸ್ವಾಮಿಗಳ ಅನ್ವೇಷಣೆಯಲ್ಲಿ ನಿರತರಾದರು. ಬಹಳ ದಿವಸಗಳ ಪ್ರಯತ್ನ ಫಲದಿಂದ ಬೆಂಗಳೂರಲ್ಲಿ ಸರ್ ಪುಟ್ಟಣ್ಣ ಶೆಟ್ಟರ ಮನೆ ದೇವರೆಂದು ಹೆಸರಾಗಿದ್ದ ವೀರಯ್ಯನವರೆಂಬುವವರನ್ನು ಬಹಳ ಪ್ರಯಾಸದಿಂದ ಅವರ ಮನವೊಲಿಸಿ, ಹುಬ್ಬಳ್ಳಿಗೆ ಕರೆತಂದರು. ವೀರಯ್ಯನವರು, ಕಾಶಿಯಲ್ಲಿ ಅಭ್ಯಾಸ ಮಾಡಿ ಸಂಸ್ಕೃತದಲ್ಲಿ ಮಹಾ ಪಾಂಡಿತ್ಯವನ್ನು ಪಡೆದು, ಎಲ್ಲ ದರ್ಶನಗಳನ್ನೂ ಪರಿಚಯ ಮಾಡಿಕೊಂಡು ಬಂದಿದ್ದರು. ಇಂಥಹ ಮಹಾಮೇಧಾವಿಗಳೂ, ಆಚಾರನಿಷ್ಠರೂ, ಕಟ್ಟಾ ಬ್ರಹ್ಮಚಾರಿಗಳೂ, ದೊರೆತದ್ದು ಹುಬ್ಬಳ್ಳಿ ಭಕ್ತರ ಸುಕೃತ ಪುಣ್ಯದಫಲ ಹಾಗೂ ಹಾನಗಲ್ ಶ್ರೀಗಳವರ ಕಠಿಣ ಪರಿಶ್ರಮ, ಪ್ರಯತ್ನಗಳ ಫಲ. ಅಂತೂ ಮೂರುಸಾವಿರಮಠಕ್ಕೆ ವೀರಯ್ಯ ಸ್ವಾಮಿಗಳವರು ಆಯ್ಕೆಯಾಗಿ, ೧೦-೨-೧೯೦೧ ನೇ ಇಸ್ವಿಯಲ್ಲಿ ಮಾಘ ಮಾಸದ ಶುಭಯೋಗದಲ್ಲಿ ಪರಮಪೂಜ್ಯರೂ, ಮಹಾತಪಸ್ವಿಗಳೂ, ಆದ ಹಾಗೂ ಹಾನಗಲ್ ಶ್ರೀಗಳವರ ಅಧಿಕಾರ ಗುರುಗಳೂ ಆದ ಲಿಂ|| ಬಿದರಿ ಕುಮಾರ ಸ್ವಾಮಿಗಳವರಿಂದ ವೀರಯ್ಯ ದೇವರಿಗೆ ವಿಧಾನೋಕ್ತವಾಗಿ ಷಟ್‌ಸ್ಥಲ ಬ್ರಹ್ಮೋಪದೇಶವಾಗಿ ಸಕಲ ಹರ-ಗುರು-ಚರಮೂರ್ತಿಗಳ ಕೋರಿಕೆಯಂತೆ ನಿರಂಜನ ಜಗದ್ಗುರು ಶೂನ್ಯ ಸಿಂಹಾಸನವನ್ನು ಆರೋಹಣ ಮಾಡಿದರು. ಅಂದಿನಿಂದ ಅವರಿಗೆ ಶ್ರೀಮಜ್ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರೆಂದು ನೂತನ ಹೆಸರಾಯಿತು.

ಪಟ್ಟಕ್ಕೆ ಬಂದ ನಂತರ ಭಕ್ತರನ್ನೆಲ್ಲಾ ಕರೆಸಿ ಸಮಾಜದಲ್ಲಿನ ಕುಂದು ಕೊರತೆಗಳನ್ನು ಅರಿತುಕೊಂಡು ಸಮಾಜ ಸುಧಾರಣೆಯ ಕಾರ್ಯವನ್ನು ಕೈಕೊಂಡು ಅನೇಕ ಸುಧಾರಣೆಗಳನ್ನು ಮಾಡಿದರು.

ತಾವು ಸ್ವತಃ ವಿದ್ವಾಂಸರಾಗಿದ್ದರಿಂದ, ಸಮಾಜದ ಏಳಿಗೆಗಾಗಿ ವಿದ್ಯಾ ಪ್ರಸಾರ ಅತ್ಯವಶ್ಯವೆಂದು ಮನಗಂಡು ಸಂಸ್ಕೃತ ಪಾಠಶಾಲೆಯನ್ನು ತೆರೆದರು.

೧೯೦೩-೧೯೦೪ರಲ್ಲಿ "ಧರ್ಮತರಂಗಿಣಿ" ಎಂಬ ಧಾರ್ಮಿಕ ವಿಚಾರಗಳಿಗೆ ಮೀಸಲಾಗಿರುವ ಒಂದು ಮಾಸಪತ್ರಿಕೆಯನ್ನು ಹೊರಡಿಸಿದರು. ಉತ್ತರ ಕರ್ನಾಟಕದಲ್ಲೇ ಮೊಟ್ಟಮೊದಲನೇ ಧಾರ್ಮಿಕ ಮಾಸಪತ್ರಿಕೆಯಿದು.

೧) ತಂತ್ರಸಂಗ್ರಹ, ೨) ವಿಶೇಷಾರ್ಥ ಪ್ರಕಾಶಿಕಾ, ೩) ಶಿವ ಮಂತ್ರ ಜಪವಿಧಿಃ ಎಂಬ ಸಂಸ್ಕೃತ ಭಾಷೆಯ ಗ್ರಂಥಗಳನ್ನು ಮುದ್ರಿಸಿ ಪ್ರಕಾಶನಗೈದರು.

ಕ್ರಿ. ಶ. ೧೯೧೨ರಲ್ಲಿ ಹುಬ್ಬಳ್ಳಿಯಲ್ಲಿ ಶ್ರೀಜಗದ್ಗುರು ಗಂಗಾಧರ ಜಿನ್ನಿಂಗ್ ಆ್ಯಂಡ್ ಪ್ರೆಸ್ಸಿಂಗ್ ಫ್ಯಾಕ್ಟರಿಯನ್ನು ಸ್ಥಾಪಿಸಿದರು. ಈ ಫ್ಯಾಕ್ಟರಿಯು ಈಗಲೂ ಮಠದ ನಿರಂತರ ಆಸ್ತಿಯಾಗಿದೆ. ಫ್ಯಾಕ್ಟರಿಯಿಂದ ಬಂದ ಉತ್ಪನ್ನದಿಂದ ಧಾರವಾಡದ ಲಿಂಗಾಯತ ವಿದ್ಯಾವರ್ಧಕ ಸಂಘಕ್ಕೆ ಪ್ರತಿ ವರ್ಷ ಎರಡುಸಾವಿರ ರೂಪಾಯಿಗಳಂತೆ ಕೊಡುವ ವ್ಯವಸ್ಥೆ ಮಾಡಿದರು.

ಹುಬ್ಬಳ್ಳಿಯ ಗೋಸಂರಕ್ಷಣಾ ಸಂಸ್ಥೆಯ ಕಟ್ಟಡಕ್ಕೆ ಮಠದ ಸ್ವಂತ ಆಸ್ತಿಯಿಂದ ೫ ಎಕರೆ ಭೂಮಿಯನ್ನು ದಾನವಾಗಿ ಆಶೀರ್ವದಿಸಿದರು.

ಹುಬ್ಬಳ್ಳಿಯಲ್ಲಿ ವೀರಶೈವ ವಿದ್ಯಾರ್ಥಿ ಗ್ರಂಥಾಲಯವೆಂಬ ಗ್ರಂಥಾಲಯವನ್ನು ಸ್ಥಾಪಿಸಿದರು. (ಈಗಿನ ಧರ್ಮಾರ್ಥ ವಾಚನಾಲಯ)

೧-೧೧-೧೯೧೯ ರಲ್ಲಿ ಹುಬ್ಬಳ್ಳಿ ಓಲೆಮಠದಲ್ಲಿ ವಿದ್ಯಾರ್ಥಿಗಳ ವಸತಿ ಗೃಹವನ್ನು ಪ್ರಾರಂಭಿಸಿದರು.

೧೦-೨-೧೯೦೧ ರಲ್ಲಿ ಅಧಿಕಾರವನ್ನು ಸ್ವೀಕರಿಸಿ ಶಾ. ಶ. ೧೮೪೨ನೇ ಶ್ರಾವಣ ಮಾಸದ ಬಹುಳ ತೃತೀಯದಂದು ಅಂದರೆ ೧೯೨೦ ರಲ್ಲಿ ಲಿಂಗೈಕ್ಯರಾದರು.

ಲಿಂಗೈಕ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಸಮಾಜ ಸುಧಾರಣೆಯನ್ನು ಮಾಡಿದಂತೆ ಪವಾಡಪುರುಷರೂ ಆಗಿದ್ದರು. ಅವರ ಕೇವಲ ಒಂದೇ ಒಂದು ಪವಾಡವನ್ನು ಮಾತ್ರ ಓದುಗರ ಮುಂದಿಡುತ್ತೇನೆ.

ಧಾರ್ಮಿಕ ಚಟುವಟಿಕೆಗಳಿಗೆ ಹಾಗೂ ಶೈಕ್ಷಣಿಕ ಸುಧಾರಣೆಗಾಗಿ ಜಗದ್ಗುರುಗಳವರು ಮುಷ್ಟಿಫಂಡ್ ಎಂಬುವ ಒಂದು ಹೊಸ ಪದ್ಧತಿಯನ್ನು ಜಾರಿಗೆ ತಂದರು. ಅದರ ಸಂಗ್ರಹಕ್ಕಾಗಿ ಮಠದ ವತಿಯಿಂದ ಕೆಲವರು

ಹುಬ್ಬಳ್ಳಿಯ ಮಾರ್ಕೆಟಿಗೆ ಹೋದಾಗ ಕೆಲವು ಪ್ರಮುಖ ವ್ಯಾಪಾರಸ್ಥರು ಮೂಗು ಮುರಿದು ಮಾತಾಡಿದರು. ಅಷ್ಟೇ ಏಕೆ? ಸ್ವಲ್ಪ ಬಿರುಸಾಗಿಯೇ ಮಾತಾಡಿದರು. ಮಠದಾಗ ನಡಿಯೋ ಕೆಲಸಕ್ಕೆ ನಾವ್ಯಾಕ ಪಟ್ಟಕೊಡ ಬೇಕು. ಮಠದ ಉತ್ಪನ್ನಕ್ಕೇನು ಕಡಿಮೆ ಆಗೈತಿ ಮಠಕ್ಕೆ ಬೆಂಕಿ ಹತ್ತ್ಯತೇನು? ಎಂದು ಬಿರುನುಡಿಯಾಡಿ ಕಳಿಸಿದರು. ಈ ವಿಷಯ ಜಗದ್ಗುರುಗಳಿಗೆ ತಿಳಿ ಯಿತು. ಅದಕ್ಕವರು ಶಿವನಿಚ್ಛೆ ಅಂದರು. ಕೂಡಲೇ ಮಾರ್ಕೆಟಿಗೆ ಬೆಂಕಿ ಹತ್ತಿ ಇಡೀ ಮಾರ್ಕೆಟು ಸುಟ್ಟು ವ್ಯಾಪಾರಸ್ಥರನೇಕರಿಗೆ ತುಂಬಾ ಹಾನಿ ತಟ್ಟಿತು. ನಂತರ ಜಗದ್ಗುರುಗಳವರ ತಪಶ್ಯಕ್ತಿ ತಿಳಿದು ವ್ಯಾಪಾರಸ್ಥರೆಲ್ಲರೂ ಮಠಕ್ಕೆ ಬಂದು ಸಾಷ್ಟಾಂಗ ನಮಸ್ಕಾರಗಳನ್ನರ್ಪಿಸಿ ಕ್ಷಮೆಯಾಚಿಸಿದರು.

## ಶ್ರೀಮಜ್ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ-ಮಹಾಸ್ವಾಮಿಗಳು ಮೂರುಸಾವಿರಮಠ, ಹುಬ್ಬಳ್ಳಿ. ಇವರ ಸಂಕ್ಷಿಪ್ತ ಚರಿತ್ರೆ

( ೧೯೨೫ )

ಶ್ರೀಮಜ್ಜಗದ್ಗುರು ಗಂಗಾಧರ ರಾಜಯೋಗೀಂದ್ರರ ತರುವಾಯ ಅಧಿಕಾರಕ್ಕೆ ಬಂದ ಶ್ರೀಮಜ್ಜಗದ್ಗುರು ಗುರುಸಿದ್ಧ ಮಹಾಸ್ವಾಮಿಗಳ ಪೂರ್ವಾಶ್ರಮದ ಊರು ಗೋಕಾಕ ತಾಲೂಕಿನ ಕೊಣ್ಣೂರು. ಕೊಣ್ಣೂರಿನ ಕಾಡಸಿದ್ಧೇಶ್ವರ ಮಠವು ಕುಂದರ ನಾಡಿನಲ್ಲಿ ಸುಪ್ರಸಿದ್ಧವಾದ ಮಠಗಳ ಲ್ಲೊಂದಾಗಿದೆ. ಆ ಮಠಕ್ಕೆ ಮರಡೀಮಠವೆಂದೂ ಕರೆಯುವ ರೂಢಿಯಿದೆ. ಅದು, ಗುರುಸ್ಥಳ ಮಠವಾಗಿದೆ. ಅದೇ ಕೊಣ್ಣೂರಿನಲ್ಲಿ ದಿ. ೬-೯-೧೯೦೮ ರಂದು ಜನ್ಮತಾಳಿದರು ನಮ್ಮ ಜಗದ್ಗುರು ಗುರುಸಿದ್ಧಸ್ವಾಮಿಗಳು ಹುಟ್ಟಿದ ಮಗುವಿಗೆ ಕೆಂಪಯ್ಯಸ್ವಾಮಿ ಎಂದು ನಾಮಕರಣವಾದ ಮರಡಿ ಮಠದಲ್ಲಿ ಪ್ರಾಥಮಿಕ ಶಿಕ್ಷಣ ಪಡೆಯುತ್ತಿರುವಾಗಲೇ ಮರಡಿ ಮಠದ ಉತ್ತರಾಧಿಕಾರಿ ಗಳಾದರು. ಕನ್ನಡ ನಾಲ್ಕನೆಯ ಇಯತ್ತೆಯಲ್ಲಿ ತೇರ್ಗಡೆಯಾದರು. ಆಗಲೇ ಇವರು, ಕನ್ನಡದಲ್ಲಿನ ಉತ್ತಮ ಗ್ರಂಥಗಳಾದ ಶರಣರ ಸಾಹಿತ್ಯ, ನಿಜ ಗುಣರ ಸಾಹಿತ್ಯ ನೊಡಲಾದವುಗಳನ್ನು ತಕ್ಕ ಮಟ್ಟಿಗೆ ಪರಿಚಯ ಮಾಡಿಕೊಂಡರು.

ಆ ಸಮಯದಲ್ಲಿ ಸಮಾಜ ಸುಧಾರಕರೂ, ಸಾಕ್ಷಾತ್ ಷಣ್ಮುಖನ ಪರಾವತಾರಿಗಳೂ ಎಂದು ಕೀರ್ತಿಪಡೆದಿದ್ದ ಹಾನಗಲ್ಲ ಶಿವಯೋಗಿಶ್ವರರು ಸಂಸ್ಥಾಪಿಸಿದ್ದ ಶಿವಯೋಗ ಮಂದಿರದ ಕೀರ್ತಿಯನ್ನು ಕೇಳಿ, ಶಿವಯೋಗ ಹಾಗೂ ಸಂಸ್ಕೃತ ಅಭ್ಯಾಸ ಮಾಡಲು ಶಿವಯೋಗ ಮಂದಿರಕ್ಕೆ ಬಂದು ಸೇರಿದರು.

ಹೀಗೆ ಕಾರಣಿಕ ಪುರುಷರಾದ ಪೂಜ್ಯ ಹಾನಗಲ್ಲ ಕುಮಾರ ಶಿವಯೋಗೀಶ್ವರರ ಕೃಪಾಪೋಷಿತರಾಗಿ ಶಿವಯೋಗಮಂದಿರದಲ್ಲಿ ಸಾಧಕರಾಗಿ ಶಿಕ್ಷಣ ಪ್ರಾರಂಭಿಸಿದರು. ಕೈ. ಪಂ. ಇಟಗಿ, ಹಿರೇಮಠದ ಸೋಮನಾಥಶಾಸ್ತ್ರಿಗಳವರಲ್ಲಿ ಸಂಸ್ಕೃತಾಧ್ಯಯನವನ್ನು ಮಾಡುತ್ತಾ, ಪ್ರತಿನಿತ್ಯ ತಪ್ಪದೇ ಶಿವಯೋಗ ಮಂದಿರದ ಸ್ಥಾನನಿರ್ದೇಶಕರಾದ ಶ್ರೀ ವಿಜಯಮಹಾಂತ ಶಿವಯೋಗೀಶ್ವರರ ಅಷ್ಟಕವನ್ನು (ಸಂ ಕಂದಗಲ್ಲ ಪರ್ವತಶಾಸ್ತ್ರಿಗಳ ಕೃತ) ಪಾರಾಯಣ ಮಾಡುವ, ನಿತ್ಯ ನೇಮವನ್ನಿರಿಸಿಕೊಂಡಿದ್ದರು. ಇದರೊಂದಿಗೆ, ಬಸವಣ್ಣನವರ ಹಾಗೂ ಶರಣರ ವಚನಗಳನ್ನೂ ತಪ್ಪದೇ ಓದುತ್ತಿದ್ದರು. ಕೆಲವು ಕಾಲ ಶಿವಯೋಗ ಮಂದಿರದಲ್ಲಿ ಶಿಕ್ಷಣ ಪಡೆದು, ಒಳ್ಳೆಯ ಆಚಾರವಂತರಾಗಿ ೧೯೩೨ರಲ್ಲಿ ಮತ್ತೆ ತಮ್ಮ ಕೊಣ್ಣೂರಿಗೆ ಮರಳಿ ಬಂದರು.

ಕೊಣ್ಣೂರಿಗೆ ಮರಳಿ ಬಂದ ನಂತರ ಅಲ್ಲಿಯ ಭಕ್ತಾದಿಗಳ ಕೋರಿಕೆಯ ಮೇರೆಗೆ ಕೊಣ್ಣೂರು ಹಾಗೂ ಮರಡೀ ಮಠಗಳ, ಪಟ್ಟಾಧಿಕಾರವನ್ನು ವಹಿಸಿ ಪಟ್ಟಾಧ್ಯಕ್ಷರಾದರು. ಕೆಲವೇ ದಿನಗಳಲ್ಲಿ ಇವರು ಆ ಪ್ರಭಾವಿ ಪಟ್ಟಾಧ್ಯಕ್ಷರೆಂದು ಹೆಸರಾದರು, ಲಕ್ಷಾಂತರ ಭಕ್ತಾದಿಗಳ ಪ್ರೀತಿಯನ್ನು ಗಳಿಸಿಕೊಂಡರು. ಆ ಭಾಗದ ಭಕ್ತರ ಪಾಲಿಗೆ, ಇವರೇ ಮನೆದೇವರಾದರು.

ಕೆಂಪಯ್ಯಸ್ವಾಮಿ ಪಟ್ಟಾಧ್ಯಕ್ಷರು ನಿರಾಶಾವೃತ್ತಿಯವರಾಗಿದ್ದರು. ಭಿಕ್ಷೆಯಿಂದ ಬಂದ ಸಂಗ್ರಹವನ್ನೆಲ್ಲಾ ಬಡಬಗ್ಗರಿಗೇ ತೂರಿಬಿಡುತ್ತಿದ್ದರು. ಅವರ ಪಾಲಿಗೆ ಅದು ಮಹಾಪ್ರಸಾದವೇ ಆಗಿತ್ತು.

ಕೆಲವು ದಿನಗಳು ಕಳೆದ ನಂತರ, ಮಠದಲ್ಲಿ ಸಂಸ್ಕೃತ ಪಾಠಶಾಲೆಯನ್ನು ಪ್ರಾರಂಭಿಸಿದರು ಹಾಗೂ ಭಕ್ತರ ಕೋರಿಕೆಯಂತೆ ಊರಲ್ಲಿ ಇಂಗ್ಲೀಷ ಶಾಲೆಯನ್ನೂ ಮಠದ ವತಿಯಿಂದ ಪ್ರಾರಂಭಿಸಿದರು. ಈಗಲೂ ಆ ಶಾಲೆಯು ಶ್ರೀ ಗುರುಸಿದ್ಧೇಶ್ವರ ಹೈಸ್ಕೂಲಾಗಿ ಪ್ರತಿವರ್ಷ ತಾಲೂಕಿಗೇ ಹೆಸರು ಗಳಿ

ಸುವಷ್ಟು ರೀತಿಯಲ್ಲಿ ಗುಣಮಟ್ಟದಲ್ಲಿ ಮುಂದುವರಿದಿದೆ. ಮುಂದೆ ಇಂಗ್ಲೀಷ ಶಾಲೆಯಲ್ಲಿ ಓದುವ ಬಡ ವಿದ್ಯಾರ್ಥಿಗಳಿಗಾಗಿ ಉಚಿತ ಪ್ರಸಾದನಿಲಯವನ್ನು ಪ್ರಾರಂಭಿಸಿ, ಸುತ್ತಮುತ್ತಲಿನ ಹಳ್ಳಿಗಳ ಬಡಜನತೆಯ ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟರು. ಈ ಎಲ್ಲಾ ಖರ್ಚುಗಳನ್ನೂ ಮಠದ ವತಿಯಿಂದಲೇ ಜರುಗಿಸುತ್ತಿದ್ದರೂ, ತಾವಾಗಿ ಭಕ್ತರು ಸಲ್ಲಿಸಿದ ಕಾಣಿಕೆ ಅಥವಾ ಧಾನ್ಯಗಳನ್ನು ಸ್ವೀಕರಿಸುತ್ತಿದ್ದರು. ಅಂತೂ ಸಂಸ್ಕೃತ ಪಾಠಶಾಲೆ, ಇಂಗ್ಲೀಷ ಶಾಲೆಯ ಪ್ರಾಧ್ಯಾಪಕರ, ವಿದ್ಯಾರ್ಥಿಗಳ ಎಲ್ಲಾ ಖರ್ಚುಗಳನ್ನೂ, ಪ್ರಸಾದನಿಲಯದ ಖರ್ಚನ್ನು ಮಠದವತಿಯಿಂದಲೇ ನಡೆಸುತ್ತಿದ್ದರು. ಅನೇಕ ವಟುಗಳಿಗೆ, ಕಾಶಿಗೆ ಹೋಗಿ ಹೆಚ್ಚಿನ ವಿದ್ಯಾಭ್ಯಾಸ ಮಾಡಲು ಅವರಿಗೆ ಬೇಕಾದ ಹಣದ ಹಾಗೂ ಇತರ ಅನುಕೂಲಗಳನ್ನು ಮಾಡಿಕೊಟ್ಟರು.

ಈ ಮಧ್ಯೆ ತಾವು ಕಲಿತ ಶಿವಯೋಗಮಂದಿರಕ್ಕೆ ಗುರುದಕ್ಷಿಣೆಯೆಂದು ಹತ್ತುಸಾವಿರ ರೂಪಾಯಿಗಳನ್ನು ಕಳಿಸಿಕೊಟ್ಟರು. ಹೀಗೆ ಕೆಂಪಯ್ಯಸ್ವಾಮಿಗಳವರು, ಕೆಲವೇ ವರ್ಷಗಳಲ್ಲಿ ಕೊಣ್ಣೂರು ಹಾಗೂ ಮರಡೀ ಮಠದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿ, ಆ ಭಾಗದಲ್ಲಿ ಅಷ್ಟೇ ಏಕೆ ಕರ್ನಾಟಕದಲ್ಲೇ ಕೀರ್ತಿವಂತರಾಗಿ, ಸುಪ್ರಸಿದ್ಧ ಮಹಾಸ್ವಾಮಿಗಳೆಂದೆನಿಸಿದರು.

ಇತ್ತ ಹುಬ್ಬಳ್ಳಿಯಲ್ಲಿ ಜಗದ್ಗುರು ಗಂಗಾಧರ ರಾಜಯೋಗೀಂದ್ರರು ಲಿಂಗೈಕ್ಯರಾಗಿ ಪೀಠ ಬರಿದಾಗಿರಲು, ಹಾವೇರಿಯ ಶಿವಬಸವ ಮಹಾಸ್ವಾಮಿಗಳವರು ಹಾಗೂ ಹಾನಗಲ್ ಶ್ರೀಗಳವರು, ಕೆಂಪಯ್ಯಸ್ವಾಮಿಗಳವರ ಕೀರ್ತಿಯನ್ನು ಕೇಳಿ ಅವರನ್ನೇ ಹುಬ್ಬಳ್ಳಿ ಮೂರುಸಾವಿರಮಠದ ಪೀಠಕ್ಕೆ ಉತ್ತರಾಧಿಕಾರಿಯನ್ನಾಗಿ ಮಾಡಬೇಕೆಂದು ಸಂಕಲ್ಪ ಮಾಡಿಕೊಂಡು, ಕೊಣ್ಣೂರು ಭಕ್ತರಿಗೆ ತಿಳಿಸಿದರು. ಕೆಂಪಯ್ಯಸ್ವಾಮಿಗಳವರನ್ನು ಬಿಟ್ಟುಕೊಡಲು ಕೊಣ್ಣೂರು ಭಕ್ತರು ಒಪ್ಪಲಿಲ್ಲ. ಆದರೂ, ಹಾನಗಲ್ಲ ಶ್ರೀಗಳವರು ಅವರ ಮನವೊಲಿಸಿ, ಕೊಣ್ಣೂರಿನಿಂದ ಕೆಂಪಯ್ಯಸ್ವಾಮಿಗಳವರನ್ನು ಕರೆದುಕೊಂಡು ಬಂದು, ಹುಬ್ಬಳ್ಳಿ ಜಗದ್ಗುರು ಮೂರುಸಾವಿರಮಠಕ್ಕೆ ಸಕಲ ವೈಭವದೊಡನೆ ಶಾಸ್ತ್ರೋಕ್ತವಾಗಿ, ಭಕ್ತರ ಅಪೇಕ್ಷೆಯಂತೆ ಪಟ್ಟಾಭಿಷಿಕ್ತರನ್ನಾಗಿ ಮಾಡಿದರು.

ಶ್ರೀಮಜ್ಜಗದ್ಗುರು ಗುರುಸಿದ್ಧ ರಾಜೇಂದ್ರ ಮಹಾಸ್ವಾಮಿಗಳವರು ಅಧಿಕಾರಕ್ಕೆ ಬಂದ ನಂತರ ತಮ್ಮ ಗುರುಗಳಾದ ಶ್ರೀಜಗದ್ಗುರು ಗಂಗಾಧರ ಮಹಾಸ್ವಾಮಿಗಳವರು ಹಾಕಿಕೊಟ್ಟ ಮಾರ್ಗದಲ್ಲಿಯೇ ಅನೇಕ ಮಹತ್ವ ವಾದ ಸುಧಾರಣೆಗಳನ್ನು ಮಾಡಿದರು.

ಶ್ರೀಮಜ್ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರ ಒಂದು ವಿಶಿಷ್ಟತೆ ಯೆಂದರೆ ಇವರ ಪ್ರತಿಯೊಂದು ಯೋಜನೆಯೂ ಬೃಹತ್ ಯೋಜನೆಯಾಗಿ ದ್ದಿತು. ಪೀಠದ ಹಾಗೂ ಸಮಾಜ ಸುಧಾರಣೆಯ ಬಗ್ಗೆ ಜಗದ್ಗುರುಗಳವರು ಮಾಡಿದ ಮಹತ್ಕಾರ್ಯಗಳನ್ನು ವಿವರವಾಗಿ ತಿಳಿಸಲು ಈ ಕಿರುಹೊತ್ತಿಗೆ ಯಲ್ಲಿ ಸಾಧ್ಯವಿಲ್ಲ. ಪ್ರತ್ಯೇಕವಾದ ಒಂದು ದೊಡ್ಡ ಹೊತ್ತಿಗೆಯನ್ನೇ ಬರೆಯ ಬೇಕಾಗುತ್ತದೆ. ಆದ್ದರಿಂದ ಸಂಕ್ಷಿಪ್ತವಾಗಿ ಅವರ ಮಹತ್ಕಾರ್ಯಗಳನ್ನು ಇಲ್ಲಿ ಕಾಣಿಸಲಾಗಿದೆ:

೧) ಮೊದಲನೆಯದಾಗಿ ತಮ್ಮ ಗುರುವರ್ಯರು ಸಂಸ್ಥಾಪಿಸಿದ್ದ ಶ್ರೀಜಗದ್ಗುರು ಗಂಗಾಧರ ಜಿನ್ನಿಂಗ್ ಆ್ಯಂಡ್ ಪ್ರೆಸ್ಸಿಂಗ್ ಫಾಕ್ಟರಿಯನ್ನು ಮತ್ತಷ್ಟು ವಿಸ್ತೃತಗೊಳಿಸಿ, ವರಮಾನವನ್ನು ಹೆಚ್ಚಿಸಿ, ಉತ್ಪಾದನೆ ಯನ್ನೂ ಹೆಚ್ಚಿಸಿದರಲ್ಲದೆ ಅನೇಕ ಬಡ ಕುಟುಂಬಗಳು ಬದುಕುವ ದಾರಿಯನ್ನು ಮಾಡಿಕೊಟ್ಟರು.

೨) ಹುಬ್ಬಳ್ಳಿಯ ಓಲೆ ಮಠದಲ್ಲಿ ಸಂಸ್ಕೃತ ಮಹಾವಿದ್ಯಾಲಯವನ್ನು ಅಭಿವೃದ್ಧಿಗೊಳಿಸಿದರು. ಗ್ರಂಥಾಲಯದಲ್ಲಿ ಹಲವು ಭಾಷೆಗಳಲ್ಲಿಯ ಗ್ರಂಥಗಳು ಲಭ್ಯವಾಗುವಂತೆ ಮಾಡಿದರು.

೩) ಮೊದಲಿಗಿಂತಲೂ ಹೆಚ್ಚಾದ ವಿದ್ಯಾರ್ಥಿಗಳಿಗೆ ಅಂದರೆ ಅಂದಾಜು ಒಂದು ನೂರು ವಿದ್ಯಾರ್ಥಿಗಳಿಗೆ ಉಚಿತವಾಗಿ ಪ್ರಸಾದ, ವಸತಿ, ಮೊದಲಾದ ಏರ್ಪಾಡುಗಳಾದವು.

೪) ಓಲೆಮಠದಲ್ಲಿ ವಿದ್ಯಾರ್ಥಿಗಳಿಗೆ ವಸತಿಗೃಹಗಳು ಪ್ರಾರಂಭವಾದವು.

೫) ಮಠದಲ್ಲಿ ಪ್ರತಿನಿತ್ಯ ಪುರಾಣ, ಪ್ರವಚನ, ತಪ್ಪದೆ ನಡೆಯುವಂತೆ ಪುರಾಣಿಕರನ್ನು ನೇಮಿಸಿದರು.

೬) ೧೯೪೭ ರಲ್ಲಿ ಹುಬ್ಬಳ್ಳಿಯಲ್ಲಿ ಜಗದ್ಗುರು ಗಂಗಾಧರ ಹೈಸ್ಕೂಲನ್ನು ಸ್ಥಾಪನೆ ಮಾಡಿದರು. ಇದಕ್ಕೆ ಐವತ್ತು ಸಹಸ್ರ ರೂಪಾಯಿಗಳನ್ನು ಆಶೀರ್ವಾದ ಮಾಡಿದರು.

೭) ವೀರಶೈವ ಸಮಾಜದ ವಿದ್ಯಾರ್ಥಿಗಳ ಏಳ್ಗೆಗಾಗಿ, ಶಿಕ್ಷಣಾಭಿವೃದ್ಧಿಗಾಗಿ ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿದ ಮಹಾತ್ಯಾಗಿ, ಶ್ರೀಮಂತ ಸಿರಸಂಗಿ ದೇಸಾಯಿಯವರ ಸ್ಮರಣಾರ್ಥವಾಗಿ ೧೯೪೧ರಲ್ಲಿ ಲಿಂಗರಾಜ ಪ್ರಸಾದ ನಿಲಯವನ್ನು ಸ್ಥಾಪನೆ ಮಾಡಿದರು.

೮) ಒಂದು ಲಕ್ಷ ರೂಪಾಯಿಗಳ ದೊಡ್ಡ ಮೊತ್ತದ ದಾನವನ್ನಿತ್ತು ಹುಬ್ಬಳ್ಳಿಯಲ್ಲಿ ವಾಣಿಜ್ಯ ಮಹಾವಿದ್ಯಾಲಯವನ್ನು ಸ್ಥಾಪಿಸಿದರು. ಈಗ ಅದು ಕೆ. ಎಲ್. ಇ. ಸೊಸಾಯಿಟಿ ಆಡಳಿತಕ್ಕೊಳಪಟ್ಟಿದೆ.

೯) ೧೯೪೪ ರಲ್ಲಿ ಹುಬ್ಬಳ್ಳಿಯಲ್ಲಿ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪ್ರಾಥಮಿಕ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯವನ್ನು ಸ್ಥಾಪಿಸಿದರು. (Sree Jagadguru Gurusiddheshwar Teachers Training School.)

೧೦) ಜಗದ್ಗುರುಗಳವರ ೮೦,೦೦೦ ರೂ. ಗಳ ದೇಣಿಗೆಯ ಆಶೀರ್ವಾದದ ಫಲವಾಗಿ ಕಾಡಸಿದ್ಧೇಶ್ವರ ಆರ್ಟ್ಸ ಮಹಾವಿದ್ಯಾಲಯವು ಉದಯವಾಯಿತು. (Kadasiddheshwar Arts College.)

೧೧) ೧೯೪೬ ರಲ್ಲಿ ಹುನಗುಂದದ ವಿಜಯ ಮಹಾಂತೇಶ್ವರರ ಹೈಸ್ಕೂಲಿಗೆ ಎಂಟು ಸಾವಿರ ರೂಪಾಯಿಗಳನ್ನು ಆಶೀರ್ವದಿಸಿದರು.

೧೨) ಹೀಗೆ ಇನ್ನೂ ಅನೇಕ ಸಂಘ, ಸಂಸ್ಥೆಗಳಿಗೆ ಅಪಾರವಾದ ಧನವನ್ನು ಆಶೀರ್ವದಿಸಿದ್ದಾರೆ.

ಇವುಗಳಲ್ಲದೆ ಗ್ರಂಥ ಪ್ರಕಾಶನ ಕಾರ್ಯಕ್ಕೈಗೊಂಡು ಸ್ವಂತವಾದ ಸಂಶೋಧನಾ ಸಂಸ್ಥೆಯೊಂದನ್ನು ಸ್ಥಾಪಿಸಿ ಆ ಸಂಸ್ಥೆಯ ಮೂಲಕ ಅನೇಕ ಅಮೂಲ್ಯವಾದ ಗ್ರಂಥಗಳನ್ನು ಪ್ರಕಟಗೊಳಿಸಿದರು.

**—: ಪ್ರಕಟವಾದ ಗ್ರಂಥಗಳ ಹೆಸರುಗಳು :—**

೧) ವೀರಶೈವಾನಂದ ಚಂದ್ರಿಕಾ (ಸಂಸ್ಕೃತ ಧರ್ಮ ಗ್ರಂಥ)
೨) ರಘುವಂಶ ರಹಸ್ಯ (ಸಂಸ್ಕೃತ ಕಾವ್ಯದ ತಿರುಳು)
೩) ಸ್ವತಂತ್ರ ಸಿದ್ಧಲಿಂಗೇಶ್ವರರ ವಚನ (ಶರಣ ಸಾಹಿತ್ಯ)

೪) ಕಾಡಸಿದ್ಧೇಶ್ವರರ ವಚನ
೫) ಅಸ್ಪೃಶ್ಯತಾ ನಿವಾರಣೆ
೬) ಹರೀಶ್ವರರ ಪ್ರಶಸ್ತಿ
೭) ಲಿಂಗಲೀಲಾ ವಿಲಾಸ
೮) ಗುರು
೯) ಕನ್ನಡ ನೀತಿ ಶತಕ
೧೦) ಲಿಂ. ಜಗದ್ಗುರು ಗಂಗಾಧರ ಮಹಾಸ್ವಾಮಿಗಳವರ ಲಾವಣಿಗಳು ಹೀಗೆ ಹಲವಾರು ಗ್ರಂಥಗಳನ್ನು ಪ್ರಕಟಪಡಿಸಿದರು.
೧೩) ಈ ಎಲ್ಲ ಮಹತ್ಕಾರ್ಯಗಳಲ್ಲದೆ ಮತ್ತೊಂದು ಬೃಹತ್ ಯೋಜನೆಯನ್ನು ಕೈಕೊಂಡು, ಬೆಳಗಾಂವಿ ಜಿಲ್ಲೆಯಲ್ಲಿಯ ಘಟಪ್ರಭಾದಲ್ಲಿ ಎರಡು ಲಕ್ಷ ರೂಪಾಯಿಗಳ ದೇಣಿಗೆ ಸಲ್ಲಿಸಿ, ಜಗದ್ಗುರು ಗುರು-ಸಿದ್ಧೇಶ್ವರ ಕೋ-ಆಪರೇಟಿವ್ ದವಾಖಾನೆಯನ್ನು ಸ್ಥಾಪಿಸಿದರು. ಈ ದವಾಖಾನೆಯು ಗ್ರಾಮಾಂತರ ಜನತೆಗೆ ಬಹಳ ಉಪಯುಕ್ತ-ವಾಗಿದೆ.
೧೪) ದಶಸಹಸ್ರ ರೂಪಾಯಿಗಳ ದೇಣಿಗೆಯ ಆಶೀರ್ವಾದವಿತ್ತು ಶ್ರೀಜಗದ್ಗುರು ಗಂಗಾಧರ ಗಾಂಧಿ ಸ್ಮಾರಕ ನೇತ್ರ ಚಿಕಿತ್ಸಾ ತರಬೇತಿ ಕೇಂದ್ರವನ್ನು ಸಂಸ್ಥಾಪಿಸಲು ಸೂತ್ರಧಾರರಾದರು. ಈ ಕೇಂದ್ರದ ವತಿಯಿಂದ ಪರರಾಷ್ಟ್ರಕ್ಕೆ ಹೆಚ್ಚಿನ ತರಬೇತಿಗೆ ಹೋಗುವವರಿಗೆ ನೆರವಾಗುವ ಸಲುವಾಗಿ ಒಂದು ನಿಧಿಯನ್ನು ಏರ್ಪಡಿಸಿದರು- ಇಂಥಹ ನಿಧಿಯ ನೆರವಿನಿಂದ ಪರರಾಷ್ಟ್ರಕ್ಕೆ ಹೋಗಿ, ನುರಿತ ನೇತ್ರ ತಜ್ಞರಾಗಿ ಬಂದವರಲ್ಲಿ ಪದ್ಮಶ್ರೀಗಳಾದ ಡಾ|| ಎಂ. ಸಿ. ಮೋದಿಯವರಂಥಹ ಸುಪ್ರಸಿದ್ಧ ವ್ಯಕ್ತಿಗಳೂ ಇದ್ದಾರೆ.
೧೫) ಶಿವಯೋಗ ಮಂದಿರದ "ಸುಕುಮಾರ" ಪತ್ರಿಕೆಗೆ ೫೦೦ ರೂಪಾಯಿಗಳನ್ನು ನೀಡಿ ಮಹಾಪೋಷಕರಾದರು.
೧೬) ಕನ್ನಡ ನಾಡಿನ ಹೆಸರಾಂತ ಶಿಕ್ಷಣವೇತ್ತರಾದ ಕೀರ್ತಿಶೇಷ ಶ್ರೀ ಶಿವಲಿಂಗಪ್ಪಾ ಬಸವನಾಳ ಇವರ ಸ್ಮರಣಾರ್ಥ ಎರಡು ಸಾವಿರ (೨೦೦೦) ರೂಪಾಯಿಗಳನ್ನು ಆಶೀರ್ವದಿಸಿದರು.

೧೭ ) ಬೆಳಗಾಂವಿಯಲ್ಲಿ ಶ್ರೀ ಮ|| ನಿ|| ಪ್ರ|| ಸ್ವಾ|| ಶಿವಬಸವ ಮಹಾ-ಸ್ವಾಮಿಗಳು, ನಾಗನೂರ. ಇವರಿಂದ ಸ್ಥಾಪನೆಯಾದ ವಿದ್ಯಾರ್ಥಿಗಳ ಪ್ರಸಾದ ನಿಲಯಕ್ಕೆ ಅವತ್ತು ಸಹಸ್ರ ರೂಪಾಯಿಗಳನ್ನು ಕೊಡ ಮಾಡಿ ಮಾರ್ಗದರ್ಶಕರಾದರು. ಈಗ ಆ ವಿದ್ಯಾರ್ಥಿನಿಲಯದಲ್ಲಿ ನಾಲ್ಕೈದುನೂರು ವಿದ್ಯಾರ್ಥಿಗಳಿಗೆ ಪ್ರಸಾದ ಹಾಗೂ ವಸತಿಗಳಿಗೆ ಆಶ್ರಯವಿದೆ.

೧೮ ) ಶ್ರೀಮಜ್ಜಗದ್ಗುರುಗಳವರು ಮಾಡಿದ ಸಮಾಜ ಸುಧಾರಣೆಯಲ್ಲಿ ಮರೆಯಲಾಗದ ಒಂದು ಮಹತ್ವವಾದ ಘಟನೆಯೆಂದರೆ ಹಿಂದೂ ಧರ್ಮದಲ್ಲಿದ್ದುಕೊಂಡು ಅತ್ಯಂತ ಹೀನ ಸ್ಥಿತಿಗೆ ಬಂದು, ಬಾಳಲಾರದೇ ಜೀವನದಲ್ಲಿ ಹೇಸಿದ ಕೆಲವು ಸಿಕ್ಕಲಿಗಾರರು ಹಿಂದೂ ಧರ್ಮವನ್ನು ತ್ಯಜಿಸಿ ಪರಧರ್ಮ ಸ್ವೀಕಾರ ಮಾಡಲು ಸಿದ್ಧರಾದಾಗ ಜಗದ್ಗುರು ಮಹಾಸನ್ನಿಧಿಯವರು ಅತ್ಯಂತ ಕರುಣಾದೃಷ್ಟಿಯಿಂದ ಊರ ಪ್ರಮುಖರನ್ನು ಕರೆಸಿ, ಅವರ ಸಮಕ್ಷಮದಲ್ಲಿ ಸಿಕ್ಕಲಿಗ ಸಮಾಜದವರಿಗೆ, ಉಪದೇಶಪರವಾದ ಮಾತುಗಳನ್ನು ಹೇಳಿ ಸಮಾಧಾನ ಪಡಿಸಿದರಲ್ಲದೆ ಅವರಿಗೆ ಬೇಕಾಗುವ ಯಾವತ್ತೂ ಸೌಕರ್ಯಗಳನ್ನು ಒದಗಿಸಿಕೊಟ್ಟು ಸಹಾನುಭೂತಿ ವ್ಯಕ್ತಪಡಿಸಿ ಅವರೆಲ್ಲರೂ ಮತಾಂತರಗೊಳ್ಳದೆ ಹಿಂದೂ ಧರ್ಮದಲ್ಲಿಯೇ ಉಳಿಯುವಂತೆ ಮಾಡಿದರು.

೧೯ ) ಧರ್ಮವು ಬಾಳಿ, ಬದುಕುವ ಸಲುವಾಗಿ, “ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲ”ವೆಂಬ ಸಂಸ್ಥೆಯನ್ನು ಸ್ಥಾಪಿಸಿ ಆರ್ಥಿಕ ನೆರವಿಲ್ಲದೆ ಧರ್ಮವು ಬಾಳಿ ಬದುಕುವುದು ಕಷ್ಟವೆಂದು ತಿಳಿದು ಅದಕ್ಕಾಗಿ ಒಂದು ದೊಡ್ಡ ನಿಧಿಯನ್ನು ಸಂಗ್ರಹಿಸಿ, ಆ ನಿಧಿಯ ಸಂಗ್ರಹದಿಂದ ಗ್ರಂಥ ಸಂಶೋಧನಾ ಕಾರ್ಯಕ್ರಮಗಳನ್ನು ಕೈಗೊಳ್ಳುವಂತೆ ಮಾಡಿದರು.

೨೦ ) ಪ್ರತಿ ವರ್ಷ ಶ್ರಾವಣ ಮಾಸದಲ್ಲಿ ಒಂದು ತಿಂಗಳಕಾಲ. ಮಠದಲ್ಲಿ ಕೀರ್ತನೆ. ಪುರಾಣಗಳು ತಪ್ಪದೆ ನಡೆಯುವಂತೆ ಏರ್ಪಾಡು ಮಾಡಿದರು.

೨೧) ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಪರದೇಶಕ್ಕೆ ಹೋಗುವ ಬುದ್ಧಿವಂತ ವಿದ್ಯಾರ್ಥಿಗಳಿಗೆ ಧನಸಹಾಯ ಮಾಡುವ ಒಂದು ಯೋಜನೆಯನ್ನು ಜಾರಿಯಲ್ಲಿ ತಂದರು.

೨೨) ಸಂಗೀತ, ಸಾಹಿತ್ಯ ಮೊದಲಾದ ಕಲಾವಂತರನ್ನು ಸತ್ಕರಿಸಿ ಅವರ ಕಲಾಪೋಷಣೆಗೆ, ಧನಸಹಾಯವನ್ನು ಮಾಡುತ್ತಾ ಕಲಾವಂತರಿಗೆ ಪೋಷಕರಾಗಿದ್ದರು.

ಈ ರೀತಿ ಅನಂತ ಕಾರ್ಯಕ್ರಮಗಳನ್ನು ಆಚರಿಸಿ, ಅಖಂಡ ಕರ್ನಾಟಕದ ಕೋಟ್ಯಾಂತರ ಜನರ ಹೃದಯಗಳನ್ನು ಸೂರೆಗೊಂಡ, ಪ್ರಾತಃ ಸ್ಮರಣೀಯರಾದ ಶ್ರೀಮಜ್ಜಗದ್ಗುರು ಗುರುಸಿದ್ಧರಾಜಯೋಗೀಂದ್ರರು ತಮ್ಮ ೬೦ನೆಯ ವಯಸ್ಸಿನಲ್ಲಿ ದಿ. ೧೭-೨-೧೯೫೮ ರಂದು ಲಿಂಗದಲ್ಲಿ ಬೆರೆತರು.

ಅಖಂಡ ಕರ್ನಾಟಕದ ಜನತೆಯಷ್ಟೆ ಅಲ್ಲದೆ ಹೊರನಾಡಿನ, ಅನೇಕ ಸಂಘ, ಸಂಸ್ಥೆಗಳು ಸಹಾ ಲಿಂ|| ಜಗದ್ಗುರು ಮಹಾಸನ್ನಿಧಿಯವರಿಗೆ ತಮ್ಮ ತಮ್ಮ ಶ್ರದ್ಧಾಂಜಲಿಗಳನ್ನರ್ಪಿಸಿದರು.

ಲಿಂ|| ಜಗದ್ಗುರು ಗುರುಸಿದ್ಧರಾಜೇಂದ್ರಮಹಾಸ್ವಾಮಿಗಳವರು ಕರ್ತೃ ಜಗದ್ಗುರು ಗುರುಸಿದ್ಧೇಶ್ವರರಲ್ಲಿ ಬೆರೆತು, ಗದ್ದುಗೆ ದರ್ಶನಕ್ಕೆ ಬರುವ ಲಕ್ಷಾಂತರ ಭಕ್ತಾದಿಗಳಿಗೆ ಬೇಡಿದಿಷ್ಟಾರ್ಥಗಳನ್ನು ಸಲ್ಲಿಸುತ್ತಿದ್ದಾರೆ.



# ಹುಬ್ಬಳ್ಳಿ ಮೂರುಸಾವಿರಮಠದ
# ಶ್ರೀಮಜ್ಜಗದ್ಗುರು ಗಂಗಾಧರ ರಾಜಯೋಗೀಂದ್ರರ,
# ಸಂಕ್ಷಿಪ್ತ ಚರಿತ್ರೆ

( ೧೯೫೮ )

ಶ್ರೀಮಜ್ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರ ತರುವಾಯ ಹುಬ್ಬಳ್ಳಿ ಮೂರುಸಾವಿರ ಮಠದ ಪೀಠಕ್ಕೆ ಅಧಿಕಾರಕ್ಕೆ ಬಂದ ಶ್ರೀಮಜ್ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಪೀಠಕ್ಕೆ ಶಿಖರಪ್ರಾಯರಾಗಿದ್ದಾರೆ. ಹಿಂದಿನ ಜಗದ್ಗುರು ಮಹಾಸನ್ನಿಧಿಯವರುಗಳು ಮಾಡಿದ ಅನೇಕ ಸುಧಾರಣೆಗಳನ್ನೂ, ಪೀಠದ ಗೌರವವನ್ನು ಮತ್ತಷ್ಟು ಉಜ್ವಲಗೊಳಿಸಿ, ಅದ್ವಿತೀಯ ಸಮಾಜ ಸುಧಾರಕರೆಂದು ಹೆಸರುವಾಸಿಯಾಗಿದ್ದಾರೆ. ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ರಂಗಗಳಲ್ಲಿ, ಮಹತ್ವವಾದ ಸುಧಾರಣೆಗಳನ್ನು ಮಾಡಿ ಅದ್ಭುತ ಪ್ರಗತಿಯನ್ನು ಸಾಧಿಸಿದ್ದಾರೆ. ಅಧಿಕಾರಕ್ಕೆ ಬಂದ ಕೇವಲ ಹದಿನಾಲ್ಕೇ ವರ್ಷಗಳಲ್ಲಿ ಅಖಂಡ ಕರ್ನಾಟಕವಷ್ಟೇ ಅಲ್ಲದೆ, ಅಖಂಡ ಭಾರತದ ಜನತೆಯನ್ನೂ ಸಹ ಬೆರಗುಗೊಳಿಸಿದ್ದಾರೆ. ಸ್ವರಾಷ್ಟ್ರದಲ್ಲಲ್ಲದೆ ಪೌರಾತ್ಯ, ಪಾಶ್ಚಿಮಾತ್ಯ ಮೊದಲಾದ ಪರರಾಷ್ಟ್ರಗಳಿಗೂ ಬಿಜಯಂಗೈದು ಭಾರತೀಯ ಸಂಸ್ಕೃತಿಯ ಮಹತ್ವವನ್ನೂ ವೀರಶೈವ ಧರ್ಮದ ತಿರುಳನ್ನೂ, ಪ್ರಸಾದ ವಾಣಿಯಿಂದ, ಅಧಿಕಾರವಾಣಿಯಿಂದ ಬಿತ್ತರಿಸಿ ಬಂದಿದ್ದಾರೆ. ಕರ್ನಾಟಕದ ವೀರಶೈವ ಇತಿಹಾಸದಲ್ಲಿಯ ವೀರಶೈವ ಜಗದ್ಗುರುಗಳಲ್ಲಿ ವಿದೇಶಗಳಿಗೆ ಹೋಗಿ ಶರಣ ಧರ್ಮದ ಪ್ರಚಾರ ಮಾಡಿದವರಲ್ಲಿ ಮೂರುಸಾವಿರಮಠದ ಶ್ರೀಜಗದ್ಗುರು ಗಂಗಾಧರ ರಾಜಯೋಗೀಂದ್ರರೇ ಪ್ರಪ್ರಥಮರು. ಇಂತಹ ಮಹಾಪುರುಷರನ್ನು ಪಡೆದ ಕನ್ನಡಾಂಬೆ ಧನ್ಯಳು. ಇಂಥಹ ಮಹಾಪುರುಷರನ್ನು ಪಡೆದ ಹುಬ್ಬಳ್ಳಿಯ ಮೂರುಸಾವಿರಮಠದ ಪೀಠವೇ ಧನ್ಯವು. ಇಂಥಹ ಕಾರಣಿಕ ಪುರುಷರನ್ನು ಹೊಂದಿದ ವೀರಶೈವ ಸಮಾಜವು ಧನ್ಯ ಧನ್ಯ. ಇಂಥವರ ಜೀವನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಹೇಳುವುದೆಂದರೆ ಮಜ್ಜಿಗೆ ಪೂರ್ತಿ ರಾಮಾಯಣ ಹೇಳಿದಹಾಗಾಗುತ್ತದೆ.

ಆದರೂ ಕೆಲವೇ ಮಾತುಗಳಿಂದ ಮಹಾಸನ್ನಿಧಿಯವರ ಪರಿಚಯ ಮಾಡಿ ಕೊಳ್ಳೋಣ.

## ಜನನ-ಬಾಲ್ಯ

ಹಿಂದಿನ ಮೈಸೂರು ಆಳರಸರ ಆಳ್ವಿಕೆಯಲ್ಲಿದ್ದ ಹಾಸನ ಜಿಲ್ಲೆಯಲ್ಲಿ ಸಶಿವಾಳವೆಂಬ ಒಂದು ಸಣ್ಣ ಗ್ರಾಮ, ಶಶಿಧರ ಶರಣರ ಬೀಡಾಗಿರುವ ಸಶಿವಾಳದಲ್ಲಿ ಇಂದಿಗೆ ನೂರು ವರ್ಷಗಳ ಪೂರ್ವದಲ್ಲಿ ಮಹಾವಿಭೂತಿ ಪುರು ಷರೂ ಮಹಾತಪಸ್ವಿಗಳೂ ಆದ ಚಿತ್ತರಗಿ ಪೀಠದ ವಿಜಯ ಮಹಾಂತ ಶಿವ ಯೋಗಿಶ್ವರರು ಅವತಾರಗೈದರು. ಅದೇ ಕೊಳಗಲ್ಲು ಮಠದ ಅದೇ ಮನೆತನದ, ಶ್ರೀ ಮರುಳಸಿದ್ದಯ್ಯನವರು ಹಾಗೂ ಚೆನ್ನಮ್ಮನವರೇ ನಮ್ಮ ಈಗಿನ ಹುಬ್ಬಳ್ಳಿಯ ಜಗದ್ಗುರು ಮಹಾಸನ್ನಿಧಿಯವರ ಪೂರ್ವಾಶ್ರಮದ ತಂದೆ-ತಾಯಿಗಳು.

ಮರುಳಸಿದ್ಧಯ್ಯನವರ ಧರ್ಮಪತ್ನಿಯವರಾದ ಚೆನ್ನಮ್ಮನವರಿಗೆ, ಬಸಲಿಂಗಯ್ಯನೆಂಬ ಒಬ್ಬನೇ ಮಗನಿದ್ದನು. ಒಮ್ಮೆ ಹಾನಗಲ್ಲ ಮಹಾ-ಶಿವಯೋಗೀಶ್ವರರು, ಚಿತ್ತರಗಿ ಪೀಠದ ವಿಜಯ ಮಹಾಂತಶಿವಯೋಗೀಶ್ವರರ ಜನ್ಮಭೂಮಿಯ ಸಂದರ್ಶನಕ್ಕಾಗಿ ಸಶಿವಾಳಕ್ಕೆ ಬಂದು ಕೊಳಗಲ್ಲ ಮಠಕ್ಕೆ ಬಂದರು. ಮರುಳಸಿದ್ಧಯ್ಯನವರು ಅತ್ಯಾನಂದದಿಂದ ಶಿವಯೋಗೀಶ್ವರರನ್ನು ಬರಮಾಡಿಕೊಂಡು ಬಂದು ಮುಹೂರ್ತ ಮಾಡಿಸಿ, ಸಾಷ್ಟಾಂಗ ನಮಸ್ಕಾರ ವನ್ನು ಮಾಡಿ, ತಮ್ಮ ಧರ್ಮಪತ್ನಿಯನ್ನು ಕರೆದರು. ಆಗ ಚೆನ್ನಮ್ಮನವರು ತಮ್ಮ ಮಗನಾದ ಬಸಲಿಂಗಯ್ಯನನ್ನು ಕರೆದುಕೊಂಡು ಬಂದು ಶ್ರೀಗಳವರ ಪಾದಕ್ಕೆ ನಮಸ್ಕಾರ ಮಾಡಿಸಿ ತಾನೂ ನಮಸ್ಕಾರ ಮಾಡಿನಿಂತಳು. ಆಗ ಹಾನಗಲ್ಲ ಶ್ರೀಗಳವರು ಆ ಹುಡುಗನನ್ನು ನೋಡಿ "ಮರುಳಸಿದ್ಧಯ್ಯನವರೇ ಹುಡುಗನನ್ನು ನಮ್ಮ ಮಠಕ್ಕೆ ಕೊಡುವಿರಾ? ನಮ್ಮ ಚಿತ್ತರಗಿಯ ಪೀಠಕ್ಕೆ ಒಬ್ಬ ವಟುವಿನ ಅವಶ್ಯವಿದೆ. ನಿಮ್ಮ ಮನೆತನದವರೇ ಬೇಕಾಗಿದೆ. ಅದಕ್ಕಾ ಗಿಯೇ ನಾವು ಬಂದಿರುವೆವು ಎಂದು ಕೇಳಿದಾಗ ಚೆನ್ನಮ್ಮನವರ ಬಾಯಿಂದ ಮಾತುಗಳೇ ಹೊರಡಲಿಲ್ಲ. ಮರುಳಸಿದ್ಧಯ್ಯನವರು ಸಹಾ ಮೌನತಾಳಿ ಹೆಂಡ

ತಿಯ ಮುಖ ನೋಡುತ್ತಾ ಸ್ತಬ್ಧರಾಗಿ ನಿಂತುಬಿಟ್ಟರು. ಆಗ ಹಾನಗಲ್ಲ ಶ್ರೀಗಳವರು ಯಥಾರ್ಥವನ್ನು ತಿಳಿದು, ಓಹೋ ನಿಮಗೆ ಬೇರೊಬ್ಬ ಮಗನಿಲ್ಲವೆಂದು ಕಾಣುತ್ತದೆ. ಪರವಾಗಿಲ್ಲ ವರ್ಷತುಂಬುವುದರೊಳಗೆ ಇನ್ನೊಬ್ಬ ಮಗನು ಹುಟ್ಟುತ್ತಾನೆ. ಅವನನ್ನೇ ನಮ್ಮ ಚಿತ್ತರಗಿ ಪೀಠಕ್ಕೆ ಕೊಟ್ಟುಬಿಡಿರಿ. ಈ ಮಗನು ನಿಮಗೇ ಇರಲಿ ಎಂದರು. ಆಗ ದಂಪತಿಗಳು ಆಗಲಿ ಮಹಾಸ್ವಾಮಿ ತಮ್ಮ ಕೃಪಾಶೀರ್ವಾದದಿಂದ ಮತ್ತೊಬ್ಬ ಮಗ ಹುಟ್ಟಲಿ ಅವಶ್ಯವಾಗಿ ಚಿತ್ತರಗಿ ಪೀಠಕ್ಕೆ ಕೊಡುತ್ತೇವೆ ಎಂದು ವಚನವಿತ್ತು, ಸಥ್ಯ ತಪ್ಪಿಸಿಕೊಂಡಿದ್ದಕ್ಕೆ ನಿಟ್ಟುಸಿರುಬಿಟ್ಟರು. ಶ್ರೀಗಳವರು ಅವರಿಂದ ಬೀಳ್ಕೊಂಡು, ಶಿವಯೋಗ ಮಂದಿರಕ್ಕೆ ಮರಳಿ ಬಂದರು, ಹಾನಗಲ್ಲ ಶ್ರೀಗಳವರ ಆಶೀರ್ವಾದದಂತೆ ಸಶಿವಾಳದಲ್ಲಿ ಚೆನ್ನಮ್ಮನವರು ವರ್ಷತುಂಬುವುದರೊಳಗೆ ಅಂದರೆ:—

ಶ್ರೀಮನ್ನೃಪ ಶಾಲಿವಾಹನ ಶಕೆ ೧೮೪೮ನೆಯ ಅಕ್ಷಯನಾಮ ಸಂವತ್ಸರ ಮಾಘ ಶುದ್ಧ ೧೦ ಶುಕ್ರವಾರ ದಿ. ೧೧-೨-೧೯೨೭ ರಂದು ರಾತ್ರಿ ೭-೪೫ ಗಂಟೆಗೆ ಸರಿಯಾಗಿ ಮೃಗಶಿರಾ ನಕ್ಷತ್ರದೊಳಗೆ ವೇ|| ಮೂ|| ಕೊಳಗಲ್ಲ ಮಠದ ವೀರಣ್ಣಯ್ಯನವರ ಮಕ್ಕಳು ಮರುಳ ಸಿದ್ಧಯ್ಯನವರ ಧರ್ಮಪತ್ನಿ ಚಿ|| ಸೌ|| ಚೆನ್ನಮ್ಮನವರು ಒಂದು ಗಂಡು ಮಗುವಿಗೆ ಜನ್ಮವಿತ್ತರು.

ಹುಟ್ಟಿದ ಮಗುವಿಗೆ ಮಹಾಂತೇಶನೆಂದು ನಾಮಕರಣ ಮಾಡಿದರು. ಹೀಗೆ ಸಶಿವಾಳದಲ್ಲಿ ಸೌ|| ಚೆನ್ನಮ್ಮನವರು ಗಂಡು ಮಗು ಹಡೆದಿರುವ ಶುಭ ವಾರ್ತೆಯನ್ನು ಕೇಳಿ ಹಾನಗಲ್ಲ ಶ್ರೀಗಳವರು ಹಿರಿ ಹಿರಿ ಹಿಗ್ಗಿದರು ಹಾಗೂ ಐದನೇ ವರ್ಷ ವಯಸ್ಸು ಮುಗಿದ ಕೂಡಲೇ ಆ ವಟುವನ್ನು ಶಿವಯೋಗ ಮಂದಿರಕ್ಕೆ ತಂದು ಮುಟ್ಟಿಸಲು ಅಪ್ಪಣೆಮಾಡಿ ಹೇಳಿ ಕಳಿಸಿದರು. ಕೆಲವು ದಿನಗಳ ನಂತರ ಹಾನಗಲ್ಲ ಮಹಾಸ್ವಾಮಿಗಳವರು ಲಿಂಗದಲ್ಲಿ ಬೆರೆದರು. ಇಡೀ ಕರ್ನಾಟಕವೇ ಶೋಕಸಾಗರದಲ್ಲಿ ಮುಳುಗಿತು.

ಇತ್ತ ಸಶಿವಾಳದಲ್ಲಿ ಬಾಲ ಮಹಾಂತೇಶನಿಗೆ ನಾಲ್ಕು ವರ್ಷಗಳು ತುಂಬಿ ಐದನೇಯ ವರ್ಷದಲ್ಲಿ ಪಾದಾರ್ಪಣೆಯಾಗಿತ್ತು. ಮರುಳಸಿದ್ಧಯ್ಯ

ನವರಿಗೆ ಹಾನಗಲ್ಲ ಶ್ರೀಗಳವರ ಅಪ್ಪಣೆ ನೆನಪಾಯಿತು ಆಗ ತಮ್ಮ ಧರ್ಮಪತ್ನಿಯವರನ್ನು ಕರೆದು, ಹಾನಗಲ್ಲ ಶ್ರೀಗಳವರಿಗೆ ನಾವು ವಚನಕೊಟ್ಟು ವಚನಬದ್ಧರಾಗಿದ್ದೇವೆ. ಆದ್ದರಿಂದ ನಮ್ಮ ಬಾಲ ಮಹಾಂತೇಶನನ್ನು ಮಂದಿರಕ್ಕೆ ಕರೆದುಕೊಂಡು ಹೋಗಿ ಬಿಟ್ಟು ಬರೋಣ ಎಂದರು. ಆದರೆ ಹೆತ್ತ ಕರುಳಿಗೆ ಸಾಧ್ಯವೇ ಬಳ್ಳಿಗೆ ಕಾಯಿಭಾರವೇ? ತಾಯಿಗೆ ಮಗುವು ಭಾರವೇ? ಅಂದಹಾಗೆ ಸೌ|| ಚೆನ್ನಮ್ಮನವರ ಮನಸ್ಸು ಒಪ್ಪಲಿಲ್ಲ. ಅಲ್ರಿ ವಚನತಗೊಂಡ ಸ್ವಾಮಿಗಳೇ ಲಿಂಗದಲ್ಲಾದ ಮೇಲೆ ಇನ್ನು ಯಾರಿಗೆ ನಮ್ಮ ಮಗುವನ್ನು ಒಪ್ಪಿಸುವುದು ? ಸಿಕ್ಕ ಸಿಕ್ಕವರಿಗೆ ಹೆತ್ತ ಮಕ್ಕಳನ್ನು ಒಪ್ಪಿಸಿ ಬರುವುದು ಹೇಗೆ ? ಅವರ ಹೆಸರಿನಿಂದ ನಮ್ಮ ಮನೆಯಲ್ಲೇ ಬೆಳೆಯಲಿ ಎಂದು ಕೇಳಿಕೊಂಡರು. ಆಗ ಮರುಳಸಿದ್ಧಯ್ಯನವರು ಶಿವ ಶಿವಾ ಎಲ್ಲಾದರೂ ಉಂಟೆ? ವಚನ ಕೊಟ್ಟ ಮೇಲೆ ತಪ್ಪಿಸಬಾರದು. ಶಿವಯೋಗ ಮಂದಿರಕ್ಕಾಗಲೀ, ಚಿತ್ತರಗಿ ಪೀಠಕ್ಕಾಗಲಿ ಒಪ್ಪಿಸಿಯೇ ಬರಬೇಕೆಂದರು. ಆಗ ಸೌ|| ಚೆನ್ನಮ್ಮನವರು ನಿಮ್ಮ ಮನಸ್ಸಿಗೆ ಬಂದ ಹಾಗೆ ಮಾಡಿರಿ, ನಿಮಗೆ ಮಕ್ಕಳು ಬೇಸರವಾಗಿದೇಂತ ಕಾಣುತ್ತೆ ಅಂದರು. ಮರುಳ ಸಿದ್ಧಯ್ಯನವರು ಉಭಯ ಸಂಕಟಕ್ಕೊಳಗಾಗಿ, ದಿಕ್ಕು ತೋಚದೆ ಕುಳಿತಿರುವಾಗ ಬಾಲ ಮಹಾಂತೇಶನು ಅಮ್ಮಾ ಅಮ್ಮಾ ಎಂದು ಅಳಲಾರಂಭಿಸಿದ, ಚೆನ್ನಮ್ಮನವರು ಓಡಿಹೋಗಿ ಏನಪ್ಪಾ ಮಹಾಂತೇಶ ಏನಾಯ್ತು ಯಾಕೆ ಅಳತಿದ್ದೀಯಾ ? ಎಂದು ಕೇಳಿದರು. ಅಮ್ಮಾ ಅಮ್ಮಾ ನನ್ನ ಕಣ್ಣೇ ಕಾಣಿಸದಂತಾಗಿದೆ. ಏನೂ ಕಾಣಿಸುವುದಿಲ್ಲಮ್ಮಾ ಎಂದು ಅಳ ತೊಡಗಿದ. ಕೂಡಲೇ ಚೆನ್ನಮ್ಮನವರು, ತಮಗೆ ತಿಳಿದ ಎಲ್ಲತರದ ಔಷಧೋಪಚಾರ ಮಾಡಿದರೂ ಮಗುವಿಗೆ ಕಣ್ಣು ಕಾಣಲಿಲ್ಲ ಊರಿನ ವೈದ್ಯರಿಂದ ಉಪಚಾರ ಮಾಡಿಸಿದರು ಆದರೂ ಪ್ರಯೋಜನವಾಗಲಿಲ್ಲ ಆಗ ಮರುಳಸಿದ್ಧಯ್ಯನವರು ತಮ್ಮ ಧರ್ಮ ಪತ್ನಿಯವರಿಗೆ ಹೇಳಿದರು:—

ನೋಡಿದೆಯಾ ಹಾನಗಲ್ಲಪ್ಪನವರ ಮಹಿಮೆ ಅಂಥಹ ಮಹಾತ್ಮರ ಮಾತನ್ನು ಪಾಲಿಸದಿದ್ದರೆ ಇದೇ ಗತಿ ಎಂದರು.

ಆಗ ಚೆನ್ನಮ್ಮನವರು

ಇರ್ರಿ ಬಿಡ್ರಿ ಇಂಥಾ ಸಮಯದಲ್ಲೂ ನೀವು ಚುಚ್ಚು ಮಾತುಗಳನ್ನು ಬಿಡುವವರಲ್ಲ ಹುಡುಗರಿಗೆ ಯಾವುದಾದರು ರೋಗ ಋಜಿನ ಬರುವುದು

ಸಹಜ ಅದಕ್ಕೆ ಇಲ್ಲದ ವಿಚಾರ ಮಾಡ್ತಿದ್ದೀರಲ್ಲಾ ಹುಡುಗನನ್ನು ಒಪ್ಪಿಸದೇ ಇರುವುದಕ್ಕೂ ಇದಕ್ಕೂ ಏನು ಸಂಬಂಧ ಎಂದು ಸೌ|| ಚೆನ್ನಮ್ಮನವರು ಹೇಳುತ್ತಿರುವಾಗಲೇ ಅವರ ಕಣ್ಣುಗಳೂ ಕಾಣದಂತಾದವು ಚೆನ್ನಮ್ಮನ ಕಣ್ಣಿಗೆ ಕತ್ತಲೆ ಕವಿಯಿತು. ಮುಂದೇನು ಗತಿ ಎಂದು, ಧಿಗ್ಭ್ರಾಂತಳಾಗಿ, ಹೌದ್ರಿ ನನ್ನ ಕಣ್ಣೂ ಕಾಣಿಸದಂತಾಗಿವೆ. ನಿಜವಾಗಲೂ ನೀವು ಹೇಳಿದ ಮಾತೇ ನಿಜ ಮೊದಲು ಹುಡುಗನನ್ನು ಮಂದಿರಕ್ಕೆ ಕರೆದುಕೊಂಡು ಹೋಗಿ ಬಿಟ್ಟು ಬರೋಣ ಎಂದು ಹೇಳಿದಳು. ಆಗ ದಂಪತಿಗಳು ಹಾನಗಲ್ಲ ಶ್ರೀಗಳವರನ್ನು ಸ್ಮರಿಸಿ ತಂದೇ ನಮ್ಮದು ತಪ್ಪಾಯಿತು. ನಮ್ಮ ತಪ್ಪಿಗೆ ಸರಿಯಾದ ಪ್ರಾಯಶ್ಚಿತ್ತವಾಯಿತು, ಕೃಪೆ ಮಾಡಿ ಕ್ಷಮಿಸಿರಿ. ನಮ್ಮ ಹುಡುಗನನ್ನು ತಪ್ಪದೇ ಕರೆದುಕೊಂಡು ಬಂದು ಮಂದಿರಕ್ಕೆ ಬಿಡುತ್ತೇವೆ ಎಂದು ಪ್ರಾರ್ಥಿಸಿಕೊಂಡು ಭಸ್ಮ ಲೇಪಿಸಿದ ಕೂಡಲೇ ಸೌ|| ಚೆನ್ನಮ್ಮನವರಿಗೂ, ಬಾಲ ಮಹಾಂತೇಶನಿಗೂ ಇಬ್ಬರಿಗೂ ಕಣ್ಣುಗಳು ಕಾಣಿಸಿದವು. ದೃಷ್ಟಿ ಬಂದಿತು. ಹಾನಗಲ್ಲಪ್ಪನ ಮಹಾತ್ಮೆಯನ್ನು ಅರಿತ ದಂಪತಿಗಳು ಬಾಲ ಮಹಾಂತೇಶನನ್ನು ಶಿವಯೋಗ ಮಂದಿರಕ್ಕೆ ಕರೆದುಕೊಂಡು ಬಂದು ಹಾನಗಲ್ಲ ಮಹಾಶಿವಯೋಗೀಶ್ವರರ ಗದ್ದುಗೆಯ ಮುಂದೆ ನಿಲ್ಲಿಸಿ:

ಗುರುವೇ ಹಾನಗಲ್ಲ ಶಿವಯೋಗಿ ನಮ್ಮನ್ನು ಕ್ಷಮಿಸಿರಿ. ನಿನ್ನ ಅಪ್ಪಣೆಯಂತೆ ಬಾಲ ಮಹಾಂತೇಶನನ್ನು ನಿನ್ನ ಪಾದಕ್ಕೆ ಒಪ್ಪಿಸಿದ್ದೇವೆ. ಹಾಲಲ್ಲಿದ್ದು ನೀರಲ್ಲಿದ್ದು ಎಂದು ಪ್ರಾರ್ಥಿಸುತ್ತಿರುವಾಗ ಹಾವೇರಿಯ ಶಿವಬಸವ ಮಹಾಸ್ವಾಮಿಗಳವರು ಬಂದು ಅವರನ್ನು ಸಮಾಧಾನಪಡಿಸಿದರು. ಮರುಳಸಿದ್ಧಯ್ಯ ಸೌ|| ಚೆನ್ನಮ್ಮ ದಂಪತಿಗಳು ಆ ಮಗುವನ್ನು ಅವರ ಉಡಿಯಲ್ಲಿ ಹಾಕಿದರು. ಮಹಾತಪಸ್ವಿಗಳೂ, ಶಾಪಾನುಗ್ರಹ ಶಕ್ತಿಯುಳ್ಳವರೂ ಆದ ಹಾವೇರಿಯ ಶ್ರೀ ಮ|| ನಿ|| ಪ್ರ|| ಸ್ವ|| ಗಳಾದ ಶಿವಬಸವ ಮಹಾಸ್ವಾಮಿಗಳವರು ಆ ಮಗುವನ್ನು ಸ್ವೀಕರಿಸಿ, ಆಶೀರ್ವದಿಸಿ ಕಳಿಸಿದರು.

## ವಿದ್ಯಾಭ್ಯಾಸ

ಬಾಲ ಮಹಾಂತೇಶ್ವರರು ಮಂದಿರದ ಸುಂದರ ಕಂದನಾಗಿ ಶ್ರೀಮ|| ನಿ|| ಪ್ರ|| ಸ್ವ|| ಶಿವಬಸವ ಮಹಾಸ್ವಾಮಿಗಳವರ ಕೃಪಾಛತ್ರದಲ್ಲಿ, ವಿದ್ಯಾಭ್ಯಾಸ ಪ್ರಾರಂಭ ಮಾಡಿದರು. ಆಗಿನ ಕಾಲಕ್ಕೆ ನವಲಗುಂದದ ಬಸವಲಿಂಗ

ಮಹಾಸ್ವಾಮಿಗಳವರೂ, ಇವರ ಹಿತಚಿಂತಕರಲ್ಲೊಬ್ಬರಾದರು. ಅಲ್ಲದೆ ಪ್ರಥಮದಲ್ಲಿ ಈಗಿನ ಹಾನಗಲ್ಲ ಸ್ವಾಮಿಗಳು ಮತ್ತು ಹುಬ್ಬಳ್ಳಿಯ ಹೊಸ ಮಠದ ಶಿವಬಸವ ಸ್ವಾಮಿಗಳವರಲ್ಲಿ ನಂತರ ಪಂ॥ ಪಗಡದಿನ್ನಿ ಬಸವರಾಜ ಶಾಸ್ತ್ರಿಗಳವರಲ್ಲಿಯೂ ಸಂಸ್ಕೃತಾಭ್ಯಾಸವನ್ನು ಮಾಡಿದರು. ಜೊತೆಯಲ್ಲಿ ಹಿಂದೀ ಭಾಷೆಯ ಅಭ್ಯಾಸವನ್ನು ಮಾಡಿ ಪ್ರವೇಶಿಕಾ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಶಿವಯೋಗಮಂದಿರದಲ್ಲಿ ಅಭ್ಯಾಸ ಮಾಡುವಾಗ ಅನೇಕ ಕಷ್ಟ ನಷ್ಟಗಳು ಒದಗಿದರೂ ಎಳೆಯ ವಯಸ್ಸಿನಲ್ಲೇ ಸಹಿಷ್ಣುತೆಯನ್ನು ಕಲಿತರು. ಸಣ್ಣ ವಯಸ್ಸಿನಲ್ಲಿಯೇ ಸಹಜವಾಗಿ ಚಿತ್ರವನ್ನು ತೆಗೆಯುವದು ಸಾಧಿಸಿ ಕೊಂಡರು.

ಮಂದಿರದಲ್ಲಿ ಸಾಧಕರಾಗಿದ್ದುಕೊಂಡೇ ಸಾಹಿತಿಯಾಗಿ ಕವಿತ್ವ ರಚನೆಗಳನ್ನು ಮಾಡತೊಡಗಿದರು. ಕೆಲವು ಪದ್ಯಗಳನ್ನು ರಚಿಸಿ ಸಹಪಾಠಿಗಳ ಮುಂದೆ ಓದಿ ತೋರಿಸಿ ಮೆಚ್ಚುಗೆಯನ್ನು ಪಡೆದರು. ಬರಬರುತ್ತಾ ಪತ್ರಿಕೆಗಳಿಗೆ ಲೇಖನಗಳನ್ನು ಬರೆದುಕೊಡಲು ಪ್ರಾರಂಭಿಸಿದರು. ಶರಣ ಸಾಹಿತ್ಯ, ನವಸಂದೇಶ, ಅಮರವಾಣಿ, ಕರ್ಮವೀರ, ಜೀವನ, ಸದ್ಧರ್ಮ ದೀಪಿಕೆ, ಜಯಕರ್ನಾಟಕ ಮುಂತಾದ ಪತ್ರಿಕೆಗಳಿಗೆ ಬಿಡಿ ಲೇಖನಗಳನ್ನು ಕಳಿಸುತ್ತಿದ್ದರು.

ಬಾಲ ಮಹಾಂತೇಶರು ಮಹಾಂತ ದೇವರಾದರು. ಮಹಾಂತ ದೇವರಾಗಿ ಕವನಸೃಷ್ಟಿಯಲ್ಲಿ ಕಾಲಿಟ್ಟರು. ಮೊದಲನೆಯದಾಗಿ "ಪಥಿಕ" ಎಂಬ ಕವನ ಸಂಗ್ರಹವನ್ನು ಬರೆದರು. ನಂತರ ಹಾವೇರಿ ಶಿವಬಸವ ಮಹಾಸ್ವಾಮಿಗಳವರ ಅಷ್ಟೋತ್ತರ ಶತನಾಮಾವಳಿ, ಬಿದರೆ ಮಠಳ ಸಿದ್ಧೇಶ್ವರ ಅಷ್ಟೋತ್ತರ ಶತನಾಮಾವಳಿ, ವಿಜಯ ಮಹಾಂತೇಶ ಲಾವಣಿ, ಹಾಗು ಶ್ರೀ ಅಪ್ಪಯ್ಯಸ್ವಾಮಿಗಳವರ ಜೀವನ ಚರಿತ್ರೆ ಮೊದಲಾದ ಕೃತಿಗಳನ್ನು ಬರೆದರು.

ಹೀಗೆ ಸಾಹಿತ್ಯ ಲೋಕದಲ್ಲಿ ಪಾದಾರ್ಪಣೆ ಮಾಡಿ ಮುಂದೆ ಶಿವಯೋಗ ಮಂದಿರದಿಂದ ಪ್ರಕಟವಾಗುತ್ತಿರುವ "ಸುಕುಮಾರ" ಹಸ್ತ ಪತ್ರಿಕೆಯ ಬರಹಗಾರರಾಗಿ ನಂತರ ಸಂಪಾದಕರಾಗಿ ಶ್ರಮಿಸಿದರು. ಆಗಿನ ಇವರ ಬರಹವನ್ನು ಕಂಡು, ಸಿದ್ಧಗಂಗಾ ಮಠಾಧೀಶರಾದ, ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಬಹಳವಾಗಿ ಮೆಚ್ಚಿಕೊಂಡರು. ಶ್ರೀ ಮಹಾಂತದೇವರು

ಶಿವಯೋಗ ಮಂದಿರದಲ್ಲಿ ಆದರ್ಶ ಸಾಧಕರಾಗಿ, ತಮ್ಮ ಸಹಪಾಠಿಗಳಿಗೆ ಮಾರ್ಗದರ್ಶಕರಾಗಿದ್ದರು. ಹೀಗೆ ಶಿವಯೋಗ ಮಂದಿರದಲ್ಲಿ ಹದಿನಾರು ವರ್ಷಗಳು ಸಾಧಕ ಸ್ಥಿತಿಯಲ್ಲಿದ್ದುಕೊಂಡು ಶಿವಯೋಗದ ಮರ್ಮವನ್ನರಿತು. ವಿದ್ಯಾವಿನಯ ಸಂಪನ್ನರಾಗಿ ಯೌವ್ವನದ ಅಂಚಿನಲ್ಲಿ ಕಾಲಿಟ್ಟರು.

## ಕಾಶೀ ಪ್ರಯಾಣ

೧೯೩೯ ರಲ್ಲಿ ಚಿತ್ತರಗಿ ಪೀಠದ ಗುರುಮಹಾಂತ ಸ್ವಾಮಿಗಳವರು ಲಿಂಗೈಕ್ಯರಾದ ಮೇಲೆ ಶ್ರೀ ಮಹಾಂತದೇವರು ಚಿತ್ತರಗಿ ಪೀಠದ ಉತ್ತರಾಧಿ ಕಾರಿಗಳಾದರು. ಆಗ ಚಿತ್ತರಗಿ ಪೀಠದ ಆಡಳಿತದ ಜವಾಬ್ದಾರಿ ವಹಿಸಿದ್ದ ಕೊಪ್ಪದ ಮಹಾಂತ ಸ್ವಾಮಿಗಳವರು ಉಚ್ಚ ಶಿಕ್ಷಣಕ್ಕಾಗಿ ಮಹಾಂತದೇವ ರನ್ನು ಕಾಶಿಗೆ ಕಳುಹಿಸಿದರು. ಹೀಗೆ ಕಾಶಿಗೆ ತೆರಳಿ ಹತ್ತು ವರ್ಷಗಳ ಕಾಲ ವಿದ್ಯಾರ್ಜನೆ ಮಾಡಿದರು. ಆದರೂ ಅವರು, ತಮ್ಮ ಪ್ರಸಾದಕ್ಕೆಂದು ತಾವೇ ಸ್ವಯಂಪಾಕ ಮಾಡಿಕೊಳ್ಳುತ್ತಿದ್ದರು. ಕಡೆಯವರೆಗೂ ಬಿಡದೆ, ಈ ಪದ್ಧತಿ ಯನ್ನು ಸಾಧಿಸಿದರು.

ಶ್ರೀ ಮಹಾಂತದೇವರು ಕಾಶಿಯಲ್ಲಿ ವಿದ್ಯಾಭ್ಯಾಸ ಮಾಡುವ ಸಮಯ ದಲ್ಲಿ ಹಿಂದೂ ವಿಶ್ವವಿದ್ಯಾಲಯದಿಂದ ನಡೆಯುವ ಬೇರೆ ಬೇರೆ ಮಹಾವಿದ್ಯಾ ಲಯಗಳಲ್ಲಿ ಅಭ್ಯಾಸ ಮಾಡಿ ಸಂಸ್ಕೃತ, ಹಿಂದೀ ಭಾಷೆಯಲ್ಲಿ ಪ್ರಾವೀಣ್ಯತೆ ಯನ್ನು ಪಡೆದರು. ವಿಶ್ವವಿದ್ಯಾಲಯದಿಂದ ವಿದ್ಯಾರ್ಥಿ ವೇತನವು ಸಹಾ ಅವರಿಗೆ ಲಭ್ಯವಿತ್ತು.

ಕಲಕತ್ತಾ ವಂಗೀಯ ಸಂಸ್ಕೃತ ಪರಿಷತ್ತಿನ ಕಾವ್ಯತೀರ್ಥ
ಡಾಕಾದ ಸಾಹಿತ್ಯರತ್ನ
ಕಾಶಿ ಹಿಂದೂ ವಿಶ್ವವಿದ್ಯಾಲಯದ ವೇದಾಂತಾಚಾರ್ಯ

ಮೊದಲಾದ ಪರೀಕ್ಷೆಗಳನ್ನು ಕೊಟ್ಟು ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾಗಿ, ಪದವೀಧರರಾದರು.

ಈ ಪರೀಕ್ಷೆಗಳಲ್ಲದೆ ಆಂಗ್ಲ ಸಾಹಿತ್ಯದ ಅಭ್ಯಾಸಕ್ಕಾಗಿ ಅಲಹಾಬಾದ ವಿಶ್ವವಿದ್ಯಾಲಯದ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮತ್ತು ಇಂಟರ ಮೀಡಿಯೇಟ ಪರೀಕ್ಷೆಯವರೆಗೂ ಓದಿದರು. ಇನ್ನು ಮುಂದಿನ

ಆಂಗ್ಲ ಭಾಷೆಯ ಪದವೀ ಪರೀಕ್ಷೆಗಳಿಗೆ ಕುಳಿತುಕೊಳ್ಳುವಷ್ಟರಲ್ಲೇ ಅವರು ಕಾಶಿಯಿಂದ ಹಿಂದಿರುಗಬೇಕಾದ ಪ್ರಸಂಗ ಒದಗಿತು. ಇತ್ತ ಚಿತ್ತರಗಿ ಪೀಠದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಕೊಪ್ಪದ ಮಹಾಂತ ಸ್ವಾಮಿಗಳವರು ವೃದ್ಧಾಪ್ಯದ ಮೂಲಕ ಬಹಳ ಅಶಕ್ತರಾದದ್ದರಿಂದ ಶ್ರೀ ವಿಜಯ ಮಹಾಂತ ದೇವರನ್ನು ಕಾಶಿಯಿಂದ ಮರಳಿ ಕರೆಸಿಕೊಳ್ಳಬೇಕಾಯಿತು. ಹೀಗೆ ಕಾಶಿ ಯಿಂದ ಬಂದ ಶ್ರೀ ವಿಜಯ ಮಹಾಂತದೇವರು ಚಿತ್ತರಗಿ ಪೀಠದ ಉತ್ತರಾ ಧಿಕಾರಿಗಳಾಗಿ ಆಡಳಿತವನ್ನು ನಡೆಸುತ್ತಾ ಹುನಗುಂದದಲ್ಲಿಯ ಶ್ರೀ ವಿಜಯ ಮಹಾಂತೇಶ್ವರ ವಿದ್ಯಾವರ್ಧಕ ಸಂಘದ ಉಪಾಧ್ಯಕ್ಷರಾಗಿ, ಕೆಲವು ದಿನ ಗಳು ಕಾರ್ಯ ನಿರ್ವಹಿಸಬೇಕಾಗುವ ಪ್ರಸಂಗ ಬಂದಿತು.

## ಶಿವನಲೀಲೆ

ಶ್ರೀ ವಿಜಯ ಮಹಾಂತದೇವರು ಚಿತ್ತರಗಿ ಪೀಠದ ಉತ್ತರಾಧಿಕಾರಿ ಯಾಗಿರುವಾಗ ಮುಂದಿನ ಪೀಠದ ಅಧಿಕಾರಿಯಾಗುವ ಸಮಯ ಸಮೀಪಿ ಸುತ್ತಿರುವಾಗ ಇತ್ತ ಹುಬ್ಬಳ್ಳಿಯ ಮೂರುಸಾವಿರಮಠದ ಜಗದ್ಗುರು ಗುರು ಸಿದ್ಧೇಶ್ವರರು ಅಸ್ವಸ್ಥತೆಯಿಂದಲೂ. ದೇಹಾಲಸ್ಯದಿಂದಲೂ, ಆದಷ್ಟು ಬೇಗ ಪೀಠಕ್ಕೆ ಉತ್ತರಾಧಿಕಾರಿಯನ್ನು ನೇಮಿಸಿಕೊಳ್ಳುವ ಸಲುವಾಗಿ ಪೀಠದ ಅಭಿಮಾನಿ ಸದ್ಭಕ್ತ ಪ್ರಮುಖರನ್ನು ಉತ್ತರಾಧಿಕಾರಿಯ ಅನ್ವೇಷಣೆಗೆ ಕಳು ಹಿಸಲಾಗಿ ಎಲ್ಲರೂ ಚಿತ್ತರಗಿಯ ಮಹಾಂತದೇವರೇ ಯೋಗ್ಯರಾದವರೆಂದು ಫಲಿತಾಂಶವನ್ನು ತಿಳಿಸಿದರು.

ಶ್ರೀ ಲಿಂ. ಜಗದ್ಗುರು ಗುರುಸಿದ್ಧೇಶ್ವರ ಮಹಾಸ್ವಾಮಿಗಳವರ ಸಂಕಲ್ಪ ಹೀಗಿದ್ದಿತು. ನಮ್ಮ ಉತ್ತರಾಧಿಕಾರಿಯಾಗುವವರು, ಶಿವಯೋಗಮಂದಿರ ದಲ್ಲಿ ಸಂಪೂರ್ಣ ತರಬೇತು ಹೊಂದಿದವರಾಗಿರಬೇಕು. ಸಮಾಜದ ಏಳ್ಗೆಗೆ ಸಮಾಜ ಸುಧಾರಣೆಗೆ ಬದ್ಧಕಂಕಣರಾಗಿರಬೇಕು. ಹಾಗೂ ಪೂರ್ವಾಶ್ರಮದ ಮೇಲೆ ಮೋಹವನ್ನು ತ್ಯಜಿಸಿರಬೇಕು. ಈ ಮೂರು ಲಕ್ಷಣಗಳುಳ್ಳವರೇ ಉತ್ತರಾಧಿಕಾರಿಯಾಗಿರಬೇಕೆಂಬ ಸಂಕಲ್ಪವಿದ್ದಿತು. ಆ ಎಲ್ಲಾ ಲಕ್ಷಣಗಳೂ ಶ್ರೀ ವಿಜಯ ಮಹಾಂತದೇವರಲ್ಲಿ ಕಂಡು ಬಂದದ್ದರಿಂದ ಇವರೇ ಯೋಗ್ಯ ಉತ್ತರಾಧಿಕಾರಿಯೆಂದು ತೀರ್ಮಾನಿಸಿದರು.

# ಶೂನ್ಯ ಸಿಂಹಾಸನಾರೋಹಣ

ಆದರೆ ವಿಜಯಮಹಾಂತ ದೇವರನ್ನು ಬಿಟ್ಟುಕೊಡಲು ಚಿತ್ತರಗಿ ಪೀಠದ ಅಭಿಮಾನಿ ಸದ್ಭಕ್ತರು ಒಪ್ಪಲಿಲ್ಲ. ಆದರೂ, ಜಗದ್ಗುರು ಗುರುಸಿದ್ಧೇಶ್ವರರು ತಮ್ಮ ತಪಃಪ್ರಭಾವದಿಂದ ಎಲ್ಲರ ಮನಸ್ಸನ್ನು ಗೆದ್ದು ಅವರ ಮನ ಒಲಿಸಿ, ವಿಜಯಮಹಾಂತ ದೇವರನ್ನು ಹುಬ್ಬಳ್ಳಿಗೆ ಕರೆಸಿಕೊಂಡೇ ಬಿಟ್ಟರು.

ದಿನಾಂಕ ೧-೨-೧೯೫೮ ರಂದು ಜಗದ್ಗುರುಗಳವರ ಅಪ್ಪಣೆಯಮೇರೆಗೆ ವಿಜಯಮಹಾಂತದೇವರು ಹುಬ್ಬಳ್ಳಿ ಮೂರುಸಾವಿರಮಠದ ಉತ್ತರಾಧಿಕಾರಿಗಳೆಂದು, ಕಾಗದ ಪತ್ರಗಳಲ್ಲಿ ನೊಂದಾಯಿಸಲಾಯಿತು. ಮುಂದೆ ಮೂರು ತಿಂಗಳುಗಳ ವರೆಗೆ ಶ್ರೀ ಮಹಾಂತದೇವರು ಜಗದ್ಗುರು ಮಹಾಸನ್ನಿಧಿಯವರ ಕೃಪೆಗೆ ಪಾತ್ರರಾದರು.

ನಂತರ ಹುಬ್ಬಳ್ಳಿಯ ಶ್ರೀಮಜ್ಜಗದ್ಗುರು ಮೂರುಸಾವಿರಮಠದ ಸಮಸ್ತ ಭಕ್ತಾದಿಗಳ ಇಚ್ಛೆಯಂತೆ ಶ್ರೀ ವಿಜಯಮಹಾಂತದೇವರಿಗೆ ವಿಧಿಪೂರ್ವಕವಾಗಿ ಪಟ್ಟಾಭಿಷೇಕ ಮಹೋತ್ಸವವನ್ನು ಜರುಗಿಸುವುದನ್ನು ನಿರ್ಣಯಿಸಿ, ಪೂರ್ವ ಸಿದ್ಧತೆಗಳನ್ನು ಅಣಿಮಾಡಿಕೊಂಡರು.

ಮುಂದೆ ಶ್ರೀ ನಿರಾಭಾರಿ ಜಗದ್ಗುರು ಪಟ್ಟಾಭಿಷೇಕ ಮಹೋತ್ಸವದ ಕಾರ್ಯಕಾರಿ ಸಮಿತಿ ಎಂಬ ಒಂದು ಸಮಿತಿಯನ್ನು ರಚಿಸಿಕೊಂಡು, ಆ ಸಮಿತಿಯ ನೇತೃತ್ವದಲ್ಲಿ ೧೮೮೦ ವಿಲಂಬ ನಾಮ ಸಂವತ್ಸರ ವೈಶಾಖ ಶುದ್ಧ ೧೩ ಗುರುವಾರ ದಿ. ೧-೫-೧೯೫೮ ರಂದು ಪ್ರಾತಃಕಾಲ ೧೦-೩೦ ಗಂಟೆಗೆ ಸಲ್ಲುವ ಮಿಥುನ ಲಗ್ನದ ಶುಭಾರಂಭದಲ್ಲಿ ಲಿಂ. ಶ್ರೀ ಮ|| ನಿ|| ಸಿದ್ಧಬಸವ ಮಹಾಸ್ವಾಮಿಗಳವರು ವಿರಕ್ತಮಠ ಜಡೆ (ತಾ|| ಸೊರಬ) ಅವರಿಂದ ಶ್ರೀ ವಿಜಯಮಹಾಂತ ದೇವರಿಗೆ ಷಟ್‌ಸ್ಥಲ ಬ್ರಹ್ಮೋಪದೇಶವಾಯಿತು. ಅಂದೇ ಸಾಯಂಕಾಲ ಶುಭ ಲಗ್ನದಲ್ಲಿ ಶೂನ್ಯ ಸಿಂಹಾಸನಾರೋಹಣ ಕಾರ್ಯಕ್ರಮವು ವಿಜೃಂಭಣೆಯಿಂದ ನೆರವೇರಿತು.

ದಿ; ೨-೫-೧೯೫೮ ಹಾಗೂ ೩-೫-೧೯೫೮ ಈ ಎರಡು ದಿವಸಗಳೂ ಮಹಾಸ್ವಾಮಿಗಳವರ ಅಡ್ಡಪಲ್ಲಕ್ಕಿ ಮಹೋತ್ಸವವು ಬಹು ಸಂಭ್ರಮದಿಂದ ಜರುಗಿತು.

ಅಂದಿನಿಂದ ಚಿತ್ತರಗಿಯ ವಿಜಯಮಹಾಂತ ದೇವರು ಹುಬ್ಬಳ್ಳಿ ಮೂರುಸಾವಿರಮಠದ ಶ್ರೀ ಮಜ್ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳಾದರು.

ಶ್ರೀಮಜ್ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಅಧಿಕಾರ ವಹಿಸಿಕೊಂಡ ಕೆಲವೇ ದಿವಸಗಳಲ್ಲಿ ಮೂರುಸಾವಿರಮಠದ ಇತಿಹಾಸದಲ್ಲಿ ಹೊಸದೊಂದು ಕ್ರಾಂತಿ ಆರಂಭವಾಯಿತು. ಮೂರುಸಾವಿರ ಮಠದ ಕೀರ್ತಿಯು ನೂರ್ಮಡಿ ಸಹಸ್ರಮಡಿ ಹೆಚ್ಚಾಯಿತು. ಶರವೇಗದಲ್ಲಿ ಅನೇಕ ಸುಧಾರಣೆಗಳನ್ನು ಕೈಕೊಂಡರು. ಅನೇಕ ಬೃಹತ್ ಯೋಜನೆಗಳನ್ನು ಸಿದ್ಧಪಡಿಸಿ ಕಾರ್ಯರೂಪಕ್ಕೆ ತಂದರು. ಮಠದ ಕಟ್ಟಡಗಳ ಜೀರ್ಣೋದ್ಧಾರವು ಭರದಿಂದ ಸಾಗಿತು. ಹಲವಾರು ಲಕ್ಷಾಂತರ ರೂಪಾಯಿಗಳ ಹೊಸ ಕಟ್ಟಡಗಳು ತಲೆಯೆತ್ತಿದವು.

ಪ್ರೊ|| ಹನ್ನೆರಡುಮಠರವರ ಭಾಷೆಯಲ್ಲಿ ಹೇಳುವುದಾದರೆ 'ಪೂಜ್ಯ ಜಗದ್ಗುರು ಗಂಗಾಧರ ಮಹಾಸ್ವಾಮಿಗಳವರು ಒಂದು ವ್ಯಕ್ತಿಯಲ್ಲ; ಶಕ್ತಿಯಾಗಿದ್ದಾರೆ' ಎಂಬುದನ್ನು ನಾಡು ಮನಗಂಡಿದೆ. ಜಗದ್ಗುರು ಪೀಠದಿಂದ ಅವರು ದೊಡ್ಡವರಾಗಿಲ್ಲ. ಕರ್ತೃತ್ವ ಶಕ್ತಿ ಪಡೆದುಕೊಂಡು ಜಗದ್ಗುರು ಪೀಠಕ್ಕೆ ಬಂದಿದ್ದಾರೆ. ಬಂದು ಪೀಠಕ್ಕೆ ಕಳೆತಂದಿದ್ದಾರೆ. ಬೃಹತ್‌ಪೀಠದ ಬೆಳಕನ್ನು ಬೆಳಗಿಸಿದ್ದಾರೆ. ಇವಕ್ಕೇ ವ್ಯಕ್ತಿ-ಶಕ್ತಿ (Man power) ಎನ್ನುವದು. ಇದಿಲ್ಲವಾದರೆ ಮಠಗಳು ಮಸಣಗಳಾಗುತ್ತವೆ. ಆಶ್ರಮಗಳು ಆಮಿಷಗಳಾಗುತ್ತವೆ. ದೇವಾಲಯಗಳು ಪ್ರೇತಾಲಯಗಳಾಗುತ್ತವೆ. ಪೂಜ್ಯ ಜಗದ್ಗುರುಗಳ ವ್ಯಕ್ತಿತ್ವದ ಬಹುಮುಖಗಳನ್ನು ಅಳೆದು ಹೇಳುವುದು ಸಾಧ್ಯವಿಲ್ಲ. ಕಾರಣ ಮಾನವ ಮಾನದಂಡದಿಂದ ಅತೀತರಾದ ಮಹಾಪ್ರಾಜ್ಞರು ಅವರಾಗಿದ್ದಾರೆ. ಅನೇಕ ಮಹಾಶಕ್ತಿಗಳ ಸಂಚಯ ಅವರಾಗಿದ್ದಾರೆ. ಅವರೊಬ್ಬರು ಜೀವಂತವಾದ ಮಹಾಸಂಸ್ಥೆ, ಬಿಡುವಿಲ್ಲದ ಕಾರಖಾನೆ, ತೆರಪಿಲ್ಲದ ಪಾವನಗಂಗಾ ಪ್ರವಾಹ. ಅವರ ವ್ಯಕ್ತಿತ್ವದ ಅನಂತತೆಯಲ್ಲಿ ಸಮಗ್ರತೆಯಿದೆ, ಸಮಗ್ರತೆಯಲ್ಲಿ ಸಮತೂಕವಿದೆ. ಇದುವೆ ದಿವ್ಯ ಜೀವನದ ಸೂತ್ರವಲ್ಲವೆ ?

## ಪಟ್ಟದಿಂದ ಪಟ್ಟಕ್ಕೆ

೧೯೭೦ ಕ್ಕೆ ಜಗದ್ಗುರು ಮಹಾಸನ್ನಿಧಿಯವರು ಅಧಿಕಾರಕ್ಕೆ ಬಂದು ಹನ್ನೆರಡು ವರ್ಷಗಳು ಸಂದವು. ಎರಡನೆಯ ಪಟ್ಟಕ್ಕೆ ಪಾದಾರ್ಪಣೆ ಮಾಡಿದ್ದಾರೆ. ಈ ಹನ್ನೆರಡು ವರ್ಷಗಳಲ್ಲಿ ಅವರು ಮಾಡಿರುವ ಬೃಹತ್ ಯೋಜನೆಗಳನ್ನೂ, ಮಹತ್ಕಾರ್ಯಗಳನ್ನೂ ವಿವರವಾಗಿ ತಿಳಿದುಕೊಳ್ಳಬೇಕಾದರೆ ಇದೊಂದು, ಸಾವಿರಾರು ಪುಟಗಳ ಬೃಹತ್ ಗ್ರಂಥವೇ ಆಗುವುದರಲ್ಲಿ ಸಂಶಯವಿಲ್ಲ. ಆದರೂ ಸಂಕ್ಷಿಪ್ತವಾಗಿ, ಕರಿಯನ್ನು ಕನ್ನಡಿಯಲ್ಲಿ ತೋರಿಸುವಂತೆ ಈ ಚಿಕ್ಕ ಹೊತ್ತಿಗೆಯಲ್ಲಿ ಆ ಮಹಾಪುರುಷರ ಮಹತ್ಕಾರ್ಯಗಳನ್ನು ಪರಿಚಯ ಮಾಡಿಕೊಡಲು ಪ್ರಯತ್ನಿಸಬೇಕಾಗಿದೆ.

ಶ್ರೀಜಗದ್ಗುರು ಗಂಗಾಧರ ಮಹಾಸ್ವಾಮಿಗಳು, ದೂರದೃಷ್ಟಿಯುಳ್ಳವರು ಹಾಗೂ ವಿಶಾಲದೃಷ್ಟಿಯುಳ್ಳವರು. ಜಗದ್ಗುರುಮಹಾಸನ್ನಿಧಿಯವರಲ್ಲಿರುವ ಮುಖ್ಯವಾದ, ಮಹತ್ವವಾದ ಒಂದು ವಿಶಿಷ್ಟತೆಯೆಂದರೆ-ಯಾವುದೇ ಕಾರ್ಯವನ್ನು ಪ್ರಾರಂಭ ಮಾಡಿದರೂ ಅದು ಆದಷ್ಟು ಬೇಗ ತ್ವರಿತಗತಿಯಿಂದ ಪೂರ್ತಿಯಾಗಲೇಬೇಕು. ಅಲ್ಲಿಯ ವರೆಗೆ ಅವರ ಮನಸ್ಸಿಗೆ ಸಮಾಧಾನವಿಲ್ಲ. ಪ್ರಾರಂಭವಾದ ಕೆಲಸವು ಸ್ವಲ್ಪಕ್ಕೆ ಆಗಲಿ, ಅರ್ಧಕ್ಕೆ ಆಗಲಿ, ಅಥವಾ ಇನ್ನೂ ಸ್ವಲ್ಪ ಉಳಿದಿದೆ ಎಂಬುವ ಯಾವುದೇ ಒಂದು ಅಸಮಾಧಾನದ ಕಾರ್ಯವು. ಅಪೂರ್ಣವಾದ ಕಾರ್ಯವು ಅವರ ಈ ಹದಿನೇಳು ವರ್ಷಗಳ ಆಳ್ವಿಕೆಯಲ್ಲಿ ಹುಡುಕಿ ತೆಗೆದರೂ ಒಂದೂ ಸಿಗಲಾರದು. ಆಮೆಯಂತೆ ಮಂದಗಮನವನ್ನು ಅವರು ಸಹಿಸರು.

ಆಡಿದ ಮಾತಿನಂತೆ ಕಾರ್ಯವಾಗಬೇಕೆಂಬುದೇ ಅವರ ಛಲ. ಮಾತಿನಂತೆ ಕೃತಿಯಿರಬೇಕು. ಒಬ್ಬರ ಮನಸ್ಸು ನೋಯಿಸದಂತೆ ಜೀವನ ಸಾಗಿಸ-ಬೇಕೆಂಬುದೇ ಅವರ ತತ್ತ್ವ. ಬೇರೆಯವರು ಇವರಿಗೆ ಎಷ್ಟು ಕಷ್ಟವನ್ನು ಕೊಟ್ಟರೂ ಅದೆಲ್ಲವನ್ನೂ ಸಹಿಸುತ್ತ, ನಗನಗುತ ವಿಧಾಯಕ ಕಾರ್ಯಗಳಲ್ಲಿ ತೊಡಗುವ ಅದ್ಭುತ ಶಕ್ತಿ, ಸಹಜವಾಗಿಯೇ ಬಂದಂತೆ ಕಾಣುತ್ತದೆ. ಎಷ್ಟು ವೈಭವವಿದ್ದರೂ, ಅದೆಲ್ಲವನ್ನೂ ಲೆಕ್ಕಿಸದೆ ದುಡಿಮೆಯೆ ಬಾಳಿನ ಗುರಿಯೆನ್ನುತ್ತ ನಿರಂತರ ಕಾಯಕದಲ್ಲಿರುವದನ್ನು ಕಂಡರೆ, ಎಂತಹನೂ ಅಚ್ಚರಿ ಪಡುತ್ತಾನೆ.

ಶ್ರೀಜಗದ್ಗುರು ಗಂಗಾಧರ ರಾಜಯೋಗೀಂದ್ರರು ಪಟ್ಟಾಭಿಷೇಕ ಆದಂದಿನಿಂದ ಇಂದಿನ ವರೆಗೆ ೩೫-೪೦ ಲಕ್ಷದಷ್ಟು ಹಣವನ್ನು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕಕ್ಕಾಗಿ, ಖರ್ಚುಮಾಡಿ, ಸಮಾಜೋನ್ನತಿ ಮಾಡಿದ್ದಾರೆ. ಈ ಹಣವನ್ನು ಭಕ್ತರ ಹಾಗೂ ಮಠದ ಉತ್ಪನ್ನದಿಂದ ಕಾರ್ಯಗೈದಿದ್ದಾರೆ. ಇವರು ಸಾರ್ವಜನಿಕ ಸೇವೆ ಮಾಡುವಾಗ ಭಕ್ತರ ಅಪಾರ ಧನ ಸಹಾಯವು ಇವರಿಗೆ ದೊರೆತಿದ್ದುದರಿಂದಲೇ ಇಂದು ಶ್ರೀಮೂರುಸಾವಿರಮಠವು ಅತ್ಯಂತ ವೈಭವದೊಡನೆ ಕಂಗೊಳಿಸುತ್ತಲಿದೆ. ಶ್ರೀಜಗದ್ಗುರು ಸನ್ನಿಧಿಯವರು ಪ್ರಾರಂಭದಲ್ಲಿ ಶ್ರೀ ಶಿವಯೋಗ ಮಂದಿರಮಹಾಸಂಸ್ಥೆಯ ಅಧ್ಯಕ್ಷರಾಗಿ, ಶಿವಯೋಗಮಂದಿರ ಸುವರ್ಣ ಮಹೋತ್ಸವವನ್ನು ಶ್ರೀಗಳವರ ಹಾಗೂ ಭಕ್ತರ ಸಹಕಾರದೊಂದಿಗೆ ಜರುಗಿಸಿದರಲ್ಲದೆ, ಅದೇ ಸಮಯದಲ್ಲಿ, ಅಖಿಲ ಭಾರತ ವೀರಶೈವ ಮಹಾಸಭೆಯ ೧೭ನೆಯ ಅಧಿವೇಶನವನ್ನು ಸಹ ಅಭೂತ ಪೂರ್ವವಾಗಿ ನೆರವೇರಿಸಿದರು. ಘಟಪ್ರಭೆಯ ಜಗದ್ಗುರು ಗುರುಸಿದ್ಧೇಶ್ವರ ಸಹಕಾರ ಆಸ್ಪತ್ರೆಯ ಪ್ರಾರಂಭೋತ್ಸವವನ್ನು ಮಾಡಿಸಿ,ಅಂದಿನಿಂದ ಇಂದಿನ ವರೆಗೆ ಅದರ ಪ್ರಗತಿಗಾಗಿ ಶ್ರಮವಹಿಸಿ ಅವರ ಗುರುಗಳ ಇಚ್ಛೆಯನ್ನು ಪೂರ್ತಿ ಮಾಡಿದ್ದಾರೆ. ಇಂದು ಈ ದವಾಖಾನೆಯು ಕರ್ನಾಟಕದಲ್ಲಿ ಬೃಹತ್ ಪ್ರಮಾಣವಾಗಿ ಬೆಳೆದು ಆದರ್ಶ ಆರೋಗ್ಯಧಾಮವಾಗಿದೆ. ಈ ವರೆಗೆ ಶ್ರೀಜಗದ್ಗುರುಗಳು ೬೫ ಗ್ರಂಥಗಳನ್ನು ತಮ್ಮ ಧರ್ಮಪ್ರಚಾರ ಮಂಡಲದಿಂದ ಪ್ರಕಟಿಸಿ, ಸಾಹಿತ್ಯಸೇವೆ ಮಾಡಿದ್ದಾರೆ. ಅನವರತ ಸಮಾಜ ಸೇವೆಯಲ್ಲಿದ್ದರೂ, ಅದರಲ್ಲಿಯೇ ಬಿಡುವು ಮಾಡಿಕೊಂಡು, ಸ್ವತಃ ೨೦ ಗ್ರಂಥಗಳನ್ನು ಸಹ ಬರೆದಿದ್ದಾರೆ. ೧೪ ಗ್ರಂಥಗಳು ಅಚ್ಚಾಗಿದ್ದು, ಇನ್ನುಳಿದವು ಅಚ್ಚಾಗಲಿವೆ. ಶ್ರೀ ಮೂರುಸಾವಿರಮಠವು ಪೂರ್ಣ. ಪರಿವರ್ತನಗೊಂಡು ಕರ್ನಾಟಕದಲ್ಲಿಯೇ ಏಕೆ ಭಾರತದಲ್ಲಿಯೇ ಆದರ್ಶ ಮಹಾಮಠವಾಗಿದೆ. ಸಾಂಸ್ಕೃತಿಕ ಸಾಮಾಜಿಕ ಕಾರ್ಯಗಳಿಗೆ ಕೇಂದ್ರವಾಗಿದೆ. ಶ್ರೀಜಗದ್ಗುರುಗಳು ಅನೇಕ ಸಂಸ್ಥೆಗಳನ್ನು ಸ್ಥಾಪಿಸಿ, ಅದರ ಬೆಳವಣಿಗೆಗಾಗಿ ಪರಿಶ್ರಮವಹಿಸಿ, ಅದರ ಭದ್ರತೆಯನ್ನೂ ಮಾಡಿದ್ದಾರೆ. ಧರ್ಮಪ್ರಚಾರಕ ಮಂಡಲದಿಂದ, "ಪರಂಜ್ಯೋತಿ" ಸಾಂಸ್ಕೃತಿಕ ಮಾಸಪತ್ರಿಕೆಯನ್ನು ಪ್ರಾರಂಭಿಸಿ, ನಾಡಿನ

ಪತ್ರಿಕೆಗಳಿಗೆ ಆದರ್ಶವಾಗಿದೆ. ಜಗದ್ಗುರು ಗಂಗಾಧರ ರಾಜಯೋಗೀಂದ್ರರ ವ್ಯಕ್ತಿತ್ವವನ್ನು ದೊಡ್ಡ ಸಾಹಿತಿಗಳಾದ ಪ್ರೊ. ಜಿ. ಎಚ್. ಹನ್ನೆರಡುಮಠ ಅವರ ಭಾಷೆಯಲ್ಲಿಯೇ ಓದಿದರೆ ಮತ್ತಿಷ್ಟು ಅರ್ಥವಾದೀತು. ಅದು ಇಂತಿದೆ:

ಜಗದ್ಗುರುಗಳ ಜೀವನದಲ್ಲಿ ಕರ್ಮಯೋಗವು ಪುಸ್ತಕದಲ್ಲಿ ಉಳಿದುಕೊಂಡ ತತ್ವವಾಗಿಲ್ಲ. ಅವರ ರಕ್ತದ ಅರ್ಥವೇ ಕರ್ಮಯೋಗವಾಗಿದೆ. ಜ್ಞಾನಸಿಂಧುವಿನ ಕ್ರಿಯಾಪಾತವಾಗಿದೆ. ಹನ್ನೆರಡು ವರ್ಷಗಳ ಹಿಂದೆ ಶ್ರೀಜಗದ್ಗುರು ಮೂರುಸಾವಿರಮಠವನ್ನು ನೋಡಿದವರು ಇಂದು ಹೊಸದಾಗಿ ನೋಡಿದರೆ ಬೆಕ್ಕಸಬೆರಗಾಗುವಂತಿದೆ. ೧೫-೨೦ ಲಕ್ಷ ರೂಪಾಯಿಗಳ ಪ್ರಚಂಡ ಸೌಧಗಳು ಅಲ್ಲಿ ಕೂಗುತ್ತ ಮೇಲೆದ್ದಿವೆ. ಆತ್ಮದ ಭವ್ಯತೆಗೆ ಚೌಕ್ಷುಕ್ಷ ದರ್ಶನೀಯತೆಯನ್ನು ಒದಗಿಸಿವೆ. ಈ ಎಲ್ಲ ಮಹಾಮಂದಿರಗಳು ಅಲಂಕಾರಕ್ಕಾಗಿ ಮೇಲೆದ್ದ ನಿರುಪಯುಕ್ತ ಆಲಯಗಳಲ್ಲ. ಶಿಕ್ಷಣ, ಸಂಸ್ಕೃತಿ ಧರ್ಮ ಜ್ಞಾನ, ಅನುಭವಗಳ ಪ್ರಸಾರಕ್ಕೆ ಕೇಂದ್ರಪ್ರಾಯವಾಗಿವೆ. ಇವುಗಳಲ್ಲಿ ವಿದ್ಯಾರ್ಥಿನಿಲಯ, ಪ್ರಾರ್ಥನಾ ಮಂದಿರ, ಪ್ರಸಾದ ಮಂದಿರ, ಕಲ್ಯಾಣಮಂಟಪ, ಅನುಭವ ಮಂಟಪ, ಸಂಸ್ಕೃತ ವಿದ್ಯಾಲಯ, ವೈದಿಕ ಪಾಠಶಾಲೆ, ಗ್ರಂಥಾಲಯ, ಸಂಶೋಧನಾ ಸಂಸ್ಥೆ "ಪರಂಜ್ಯೋತಿ" ಕಾರ್ಯಾಲಯ, ಮುದ್ರಣಾಲಯ, ಪ್ರಾಥಮಿಕ ಶಾಲೆಗಳು, ಬಾಲಕಿಯರ ಬಾಲಕರ ಮಾಧ್ಯಮಿಕ ಶಾಲೆಗಳು, ಮಹಿಳಾ ಕಾಲೇಜ, ಜನರಲ್ ಹಾಸ್ಟೇಲ್, ಕುಮಾರೇಶ್ವರ ಶಿವಯೋಗಿ ಸಂಘ, ವಿದ್ಯಾವರ್ಧಕ ಸಂಘ, ಗೋಶಾಲೆ, ಅತಿಥಿ ಮಂದಿರ, ಅಂಚೆಮನೆ, ಧರ್ಮಛತ್ರ, ಮಠದ ಕೇಂದ್ರ ಕಚೇರಿ, ಸ್ವಾಮಿಗಳು ದರ್ಶನವನ್ನೀಯುವ ಚೇಂಬರ, ಮೀಟಿಂಗ್ ಹಾಲ್, ಸ್ವಾಮಿಗಳ ಪೂಜಾ ಮಂದಿರ, ಧ್ಯಾನಮಂದಿರ, ವಾಚನಾಲಯ, ತಾಳೋಲೆಗಳ ಸಂಗ್ರಹಾಲಯ, ಸ್ಟೋರ್‌ಹೌಸ, ಸಂಸ್ಕೃತಿ ಪ್ರಚಾರೋಪನ್ಯಾಸಮಾಲೆ, ಪೂಜಾ ಸೇವಾ ಸಮಿತಿ, ವೀರಶೈವ ಸಂಘಟನಾ ಸಮಿತಿ ಮುಂತಾದ ಸಂಸ್ಥೆಗಳು ನೆಲೆಸಿವೆ. ಈ ಎಲ್ಲ ಸಂಸ್ಥೆಗಳೂ ಜಗದ್ಗುರುಗಳ ನೇರ ಮಾರ್ಗದರ್ಶನದಲ್ಲಿ ಪ್ರಗತಿ ಮುಖದತ್ತ ಸಾಗಿವೆ. ಶ್ರೀ ಜಗದ್ಗುರುಗಳು ತಮ್ಮ ಕುಮಾರೇಶ್ವರ ಶಿವಯೋಗಿ ಸಂಘದಿಂದ ತಯಾರಾದ ಸಾಧಕರನ್ನು ನಾಡಿನ ಮೂಲೆ ಮೂಲೆಗಳಲ್ಲಿ ಬರಿದಾದ ಪೀಠಗಳಿಗೆ, ಮಠಗಳಿಗೆ, ನೀಡಿ ಅಲ್ಲಿ ಅವರಿಂದ ಜನಜಾಗೃತಿ

ಮಾಡಿಸುತ್ತಿದ್ದಾರೆ. ಈ ಎಲ್ಲ ಆಂತರಿಕ ಸಂಸ್ಥೆಗಳಲ್ಲದೆ, ಕನ್ನಡ ನಾಡಿನ ಒಳ-ಹೊರಗಿನ ಅನೇಕ ಸಂಸ್ಥೆಗಳನ್ನು ಸಮರ್ಥ ರೀತಿಯಿಂದ ನೋಡಿಕೊಂಡು ಹೋಗುತ್ತಿದ್ದಾರೆ. ಅಲ್ಲದೆ ಆ ಸಂಸ್ಥೆಗಳಿಗೆ ಶ್ರೀ ಮಠದಿಂದ ಲಕ್ಷಾಂತರ ಹಣ ನೀಡಿ ಬೆಳೆಸಿದ್ದಾರೆ.

ಒಮ್ಮೆ ಕಲಬುರ್ಗಿ, ರಾಯಚೂರು, ವಿಜಾಪುರ, ಬೆಳಗಾಂವ ಜಿಲ್ಹೆಗಳಲ್ಲಿ ಭೀಕರ ಬರಗಾಲ ಬಿದ್ದಾಗ, ವಿದೇಶ ಯಾತ್ರೆಯ ಆಮಂತ್ರಣವು ಬಂದರೂ, ಅದನ್ನು ಕಡೆಗಣಿಸಿ, ಮಾನವತೆಯ ಸಂಸ್ಕೃತಿಯನ್ನು ತಮ್ಮ ಮನಸ್ಸಿನಲ್ಲಿ ಮೆಲಕುಹಾಕಿ, ತಮ್ಮ ಹುಬ್ಬಳ್ಳಿಯಲ್ಲಿಯ ಭಕ್ತರನ್ನು ಕರೆದುಕೊಂಡು ಪಾದಯಾತ್ರೆ ಮಾಡಿ, ೫-೬ ಲಕ್ಷ ರೂಪಾಯಿ, ಸಾವಿರಾರು ಚೀಲ ಧಾನ್ಯ, ೨-೩ ಟ್ರಕ್ ಅರಿವೆಗಳನ್ನು ಸಂಗ್ರಹಿಸಿ ಭೀಕರ ಬರಗಾಲದಿಂದ ಬಳಲುತ್ತಿರುವ ಜನತೆಯನ್ನು ಉಳಿಸಿದರು. ರಾಮದುರ್ಗ, ಗುಳೇದಗುಡ್ಡದಲ್ಲಿ ಪಾದಯಾತ್ರೆ ಮಾಡಿ, ಲಕ್ಷಾಂತರ ರೂಪಾಯಿಗಳನ್ನು ಕೂಡಿಸಿ, ಧನ-ಧಾನ್ಯ ದನ-ಕರುಗಳಿಗೆ ಮೇವು ಸಂಗ್ರಹಿಸಿ,ಅಲ್ಲಲ್ಲಿ ನೂರಾರು ಗಂಜಿ ಕೇಂದ್ರಗಳನ್ನು ತೆರೆದು ಮಹದುಪಕಾರ ಮಾಡಿದ್ದು, ನಾಡಿಗೆ ನಾಡೇ ಸ್ಮರಿಸುತ್ತಲಿದೆ.

ನಾಡಿನ ಅನೇಕ ಶಿಕ್ಷಣ ಸಂಸ್ಥೆಗಳೂ, ಕಾಲೇಜುಗಳೂ, ಧಾರ್ಮಿಕ ಸಂಸ್ಥೆಗಳೂ, ಮಠ-ಮಾನ್ಯಗಳೂ, ಸಾಮಾಜಿಕ ಸಂಘಗಳೂ, ಸಾಂಪತ್ತಿಕ ನಿಯೋಜನೆಗಳೂ, ಬ್ಯಾಂಕುಗಳೂ, ಪತ್ರಿಕೆಗಳೂ, ಜಗದ್ಗುರುಗಳ ದಕ್ಷ ಮಾರ್ಗದರ್ಶನವನ್ನೂ, ಆಶೀರ್ವಾದವನ್ನೂ, ಮೇಲಿಂದ ಮೇಲೆ ಪಡೆಯುತ್ತಲಿವೆ. ಅಂಥವುಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಕೆ. ಎಲ್. ಈ ಸಂಸ್ಥೆ, ಪ್ರಮುಖ ವಾಣಿಜ್ಯ ಸಂಘಗಳು ಮೊದಲಾದವುಗಳನ್ನೂ ಗಮನಿಸಬಹುದು.

ಶ್ರೀ ಜಗದ್ಗುರುಗಳು ಮೂಲತಃ ಜ್ಞಾನಜೀವಿಗಳು. ಶಿಕ್ಷಣ ಪ್ರೇಮಿಗಳು. ಜ್ಞಾನಪ್ರಸಾರವೆಂದರೆ ಅವರ ಮೈ ಉಬ್ಬುತ್ತದೆ. ಇಮ್ಮಡಿ-ಮುಮ್ಮಡಿ ಉತ್ಸಾಹ ಪುಟಿಯುತ್ತದೆ. ಇದಕ್ಕಾಗಿ ಅನೇಕ ಶಾಲೆ-ಕಾಲೇಜುಗಳನ್ನು ಸ್ಥಾಪಿಸಿದರು. ಮಹಿಳೆಯರ ಉನ್ನತಿಗಾಗಿ, ಗರ್ಲ್ಸ್ ಹಾಯ್‌ಸ್ಕೂಲು, ಮಹಿಳಾ ಕಾಲೇಜು ಹಾಗೂ ಮಹಿಳಾ ಹಾಸ್ಟೇಲ್ ಸ್ಥಾಪಿಸಿ, ಭಕ್ತರ ಸಹಾಯದಿಂದ ಕಟ್ಟಿಸಿ, ಹುಬ್ಬಳ್ಳಿಗೆ ಕೀರ್ತಿ ತಂದಿದ್ದಾರೆ. ಶ್ರೀಜಗದ್ಗುರು ಮೂರುಸಾವಿರ

ಮಠ ಗ್ರಂಥ ಮಾಲೆಯಿಂದ ಅನೇಕ ಉದ್ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಅವರ ಗುರುಗಳು ಹಚ್ಚಿದ ಸಸಿಯನ್ನು ಹೆಮ್ಮರವಾಗಿ ಬೆಳೆಸಿದ್ದಾರೆ. ಗ್ರಂಥ ಪ್ರಕಟನೆಗಾಗಿ ಲಕ್ಷಾಂತರ ಧನವನ್ನು ವಿನಿಯೋಗಿಸಿದ್ದಾರೆ. ಈಗಾಗಲೇ ವಿಚಾರವಂತರನ್ನು ಕೂಡಿಸಿ, ೬೦೦ ಗ್ರಂಥಗಳ ಪ್ರಕಟನೆಯ ಬೃಹದ್ಯೋಜನೆಯನ್ನು ತಯಾರಿಸಿದ್ದಾರೆ. ಅದಕ್ಕಾಗಿ ೬೫ ಲಕ್ಷ ರೂಪಾಯಿಗಳ ನಿಧಿ ಸಂಗ್ರಹ ಯೋಜನೆಯನ್ನು ಮಾಡಿದ್ದಾರೆ. ಹಗಲೆನ್ನದೆ, ರಾತ್ರಿಯನ್ನದೆ ಓತಪ್ರೋತವಾಗಿ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ರಂಗಕ್ಕಾಗಿ ದುಡಿಯುತ್ತಿರುವದು ಅಭಿಮಾನಪಡುವಂತಹದಾಗಿದೆ. ಏಕ ಕಾಲಕ್ಕೆ ನಾಲ್ಕೆಂಟು ಕಡೆಗೆ ಗಮನವಿರಿಸಿ ಹತ್ತಾರು ಕಾರ್ಯಗಳಲ್ಲಿ ತತ್ಪರರಾಗಬಲ್ಲ ವಿಚಿತ್ರ ವ್ಯಕ್ತಿಕೌಶಲ ಅವರಿಗಿದೆ. "ಇದು ಅವರಿಗೆ ದೇವರಿತ್ತ ವರದಾನವಾಗಿದೆ. ಎಂದಿಗೂ ಯಾವ ಭಕ್ತರೂ ಜಗದ್ಗುರುಗಳು ಬೇಸರಿಕೆಯಿಂದ ಬಳಲಿದ್ದನ್ನು, ಆಕಳಿಸಿದನ್ನು, ಮುಖ ಸಪ್ಪಗೆ ಮಾಡಿದ್ದನ್ನು, ಇಲ್ಲವೇ ಕ್ರೋಧದಿಂದ ಕುಪಿತರಾಗಿದ್ದನ್ನು ನೋಡಿಲ್ಲ. ಲೋಕದ ಸಿಹಿ ಕಹಿಗಳನ್ನು ನಗುನಗುತ್ತ ಎದುರಿಸಿ, ಪ್ರತಿರೋಧ ಶಕ್ತಿಗಳನ್ನು ನಿಷ್ಫಲಗೊಳಿಸಿ, ಆಕಾಶ ನೌಕೆಯ ತೀಕ್ಷ್ಣವೇಗದಿಂದ ಮುನ್ನುಗ್ಗಬಲ್ಲ ವೈಜ್ಞಾನಿಕ ಲೋಕದ ರಸಋಷಿ ಅವರಾಗಿದ್ದಾರೆ" ಶ್ರೀಜಗದ್ಗುರುಗಳು ನಿಸ್ವಾರ್ಥ ಸಾಮಾಜಿಕ ಸೇವೆ ಮಾಡುತ್ತಿರುವಾಗ, ಅಸೂಯೆಯಿಂದ ಕಾಡಿದವರನ್ನೂ, ಕಾಡುತ್ತಿರುವವರನ್ನೂ ನೋಡಿದರೆ, ಕಣ್ಣೀರಿಡುವಂತಹದಾಗಿದೆ. ಆದರೂ ಅದೆಲ್ಲವೂ ಶಿವನಿಚ್ಛೆಯೆನ್ನುತ್ತ ತಮ್ಮ ಕರ್ತವ್ಯವನ್ನು ಮನಮುಟ್ಟಿ ಮಾಡುತ್ತಿರುವದು ನಾವಿಂದು ಕಣ್ಣಾರೆ ಕಾಣುತ್ತಿದ್ದೇವೆ. ಅವರ ಈ ೧೬-೧೭ ವರ್ಷಗಳಲ್ಲಿ ಮಾಡಿದ ಸಾಹಸಮಯ ಜೀವನವು ಒಂದೇ ಎರಡೇ ಸಹಸ್ರ ಮುಖವಾಗಿ ಹರಿದಿದೆ. ಜನರನ್ನು ತಣಿಸಿದೆ. ಅವರಿಂದ ಉಪಕಾರ ಪಡೆದವರೂ ಸಹ ಎದುರಾದರೂ ಸಂಕೋಚಪಡದೆ, ಅವರ ಹಿತವನ್ನು ಬಯಸಿದ್ದು ನೋಡಿದರೆ, ಎಂತಹ ಕಠೋರ ಹೃದಯವೂ ಕರಗುವಂತಹದಾಗಿದೆ. ಅವರಿಗೆ ಮೇಲಿಂದ ಮೇಲೆ ಹಲ್ಲಿನ ಬೇನೆ, ಬಹಳ ಕಾರ್ಯ ಒತ್ತಡದಿಂದ ದೇಹಾಲಸ್ಯ ವುಂಟಾದರೂ ಶರಣಕಾಯಕವನ್ನು ಎಂದಿಗೂ ಬಿಟ್ಟಿಲ್ಲ. ಅದನ್ನು ಸಮಾಜವು ನೋಡಿ ತಿಳಿದುಕೊಂಡು ಸಹಕಾರ ನೀಡಬೇಕು.

"ಮೂರುಸಾವಿರಮಠವು ಮೊದಲಿಗಿಂತಲೂ, ಕನ್ನಡ ನಾಡಿನಲ್ಲಿ ದಾನ ದೇವತೆಯೆಂದು ಹೆಸರಾಗಿದೆ. ಸಾವಿರಾರು ಜನ ವಿದ್ಯಾರ್ಥಿ-ವಿದ್ಯಾರ್ಥಿನಿಯರು ವೈಯಕ್ತಿಕವಾಗಿ ಲಾಭ ಪಡೆದಿದ್ದಾರೆ. ದೇಶವಿದೇಶಗಳಲ್ಲಿ ಅಭ್ಯಸಿಸುವ ಉಚ್ಚ ವ್ಯಾಸಂಗದ ವಿದ್ಯಾರ್ಥಿಗಳು ಜಗದ್ಗುರುಗಳಿಂದ ಸಾಕಷ್ಟು ಧನ ಸಹಾಯ ಹೊಂದಿದ್ದಾರೆ. ಇಂಜನೀಯರರಾಗಿದ್ದಾರೆ, ಪದವೀಧರರಾಗಿದ್ದಾರೆ, ಡಾಕ್ಟರ ರಾಗಿದ್ದಾರೆ. ಇದು ವೈಯಕ್ತಿಕವಾಗಿ ವ್ಯಕ್ತಿರೂಪದಿಂದ ನೀಡಿದ ದಾನ ಮಾತ್ರವಾದರೆ, ಅಸಂಖ್ಯ ಸಂಘ-ಸಂಸ್ಥೆಗಳೂ, ಕಾಲೇಜುಗಳೂ, ಶಾಲೆಗಳೂ, ಧಾರ್ಮಿಕ ರಂಗಗಳೂ, ಸಾಂಸ್ಕೃತಿಕ, ಸಾಮಾಜಿಕ ಕೂಟಗಳೂ, ಜ್ಞಾನ ಮಂದಿರಗಳೂ, ಪ್ರಸಾದ ನಿಲಯಗಳೂ ಮಹಾಸನ್ನಿಧಿಯ ಕೃಪಾಪೋಷಣೆ ಯಿಂದ ಮೇಲೆದ್ದು ನಿಂತಿವೆ."

ಉದಾಹರಣೆಗೆ:—

ಇಲಕಲ್ಲಿನ ವಿಜಯಮಹಾಂತೇಶ್ವರ ಆರ್ಟ್ಸ ಸಾಯಿನ್ಸ ಕಾಲೇಜ,
ಯಾದವಾಡದ ನೀಲಕಂಠೇಶ್ವರ ಹಾಯಸ್ಕೂಲು,
ಹುಕ್ಕೇರಿಯ ಕಾಡಸಿದ್ಧೇಶ್ವರ ಹಾಯ್‌ಸ್ಕೂಲು,
ಹುಬ್ಬಳ್ಳಿಯ ಮಹಿಳಾ ವಿದ್ಯಾಪೀಠ,
ಧಾರವಾಡದ ಕುಮಾರೇಶ್ವರ ಆಯುರ್ವೇದ ದವಾಖಾನೆ,
ಧಾರವಾಡದ ಗುರುಸಿದ್ಧೇಶ್ವರ ಹೋಮಿಯೋಪಥಿ ದವಾಖಾನೆ,
ಧಾರವಾಡದ ಬಸವಮಂಗಲ ಭವನ,
ಶಿವಯೋಗಮಂದಿರದ ಧ್ಯಾನಧ್ಯಾಮ,
ಹುಬ್ಬಳ್ಳಿ ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಪೂಜಾ ಸೇವಾಸಮಿತಿ,
ಹುಬ್ಬಳ್ಳಿಯ ಜಗದ್ಗುರು ಗುರುಸಿದ್ಧೇಶ್ವರ ಕೀರ್ತನ ಮಹಾವಿದ್ಯಾಲಯ
ಗದುಗಿನ ಹಾವೇರಿಯ ಕುಮಾರೇಶ್ವರಕೃಪಾಪೋಷಿತಪಾಠಶಾಲೆಗಳು,

ಅಲ್ಲದೆ ಅನೇಕ ಪ್ರಾಥಮಿಕ ಶಾಲೆಗಳು ಹಾಗೂ ಮಠ-ಮಂದಿರಗಳು, ಜಗದ್ಗುರುಗಳು ತಮ್ಮ ಮಠದ ಹಾಗೂ ಭಕ್ತರ ಉದಾರಾಶ್ರಯದಲ್ಲಿ ಮೇಲೆದ್ದು ನಾನಾ ಸಂಸ್ಥೆಗಳಿಗೆ ಈಗಾಗಲೆ ೧೫-೨೦ ಲಕ್ಷಕ್ಕೂ ಮಿಗಿಲಾಗಿ ಧನವಿನಿಯೋಗ ಮಾಡಿದ್ದಾರೆ. ಸುಮಾರು ಇಷ್ಟೇ ಮೊತ್ತದ ದ್ರವ್ಯವನ್ನು ನಾಡಿನ ನಾನಾ ಸಂಘ-ಸಂಸ್ಥೆಗಳಿಗೆ ನೀಡಿದ್ದಾರೆ.

ಶ್ರೀ ಜಗದ್ಗುರುಗಳಿಗೆ ಭಕ್ತರು ಆಧಾರಸ್ಥಂಬರಿದ್ದಂತೆ. ಅವರಿಂದ ಮುಕ್ತ ಕಾಣಿಕೆಯನ್ನು ಸ್ವೀಕರಿಸಿ, ಅದನ್ನೆಲ್ಲ ವಿಸ್ತರಣೆಗೆ ಹಾಗೂ ಶಾಲೆ ಕಾಲೇಜುಗಳ ಭದ್ರತೆಗಾಗಿ ಮೀಸಲಾಗಿರಿಸಿದ್ದಾರೆ. ಇಂಥ ಶ್ರದ್ಧಾಳುಗಳಿಂದ ಪಡೆದ ಕಾಣಿಕೆ ಧನದಿಂದ ಮೂರುಸಾವಿರಮಠದ ಷಟ್‌ಸ್ಥಲ ಸೂಚಕ ಮಹಾದ್ವಾರವನ್ನು ಐದು ಲಕ್ಷಕ್ಕೂ ಮೇಲ್ಪಟ್ಟು ಧನವಿನಿಯೋಗದಿಂದ ಕಟ್ಟಿಸಿದ್ದಾರೆ. ಅದರ ಮೇಲೆ ಭವ್ಯವಾದ ಗೋಪುರ ಗಡಿಯಾರ ರಾರಾಜಿಸುತ್ತದೆ. ನಾಡಿಗೆ ಆದರ್ಶದ ಮಹಾಮಠವಾಗಿದೆ. ಮಠದ ಮಹಾದ್ವಾರ ಒಳಭಾಗದಲ್ಲಿ ಸುಂದರ ಧರ್ಮಛತ್ರವೂ ತಯಾರಾಗುತ್ತಲಿದೆ. ಭಕ್ತರ ಸಹಾಯದೊಂದಿಗೆ, ೨೦-೨೫ ಲಕ್ಷ ರೂಪಾಯಿ ವೆಚ್ಚದಲ್ಲಿ ಮಹಿಳಾ ಕಾಲೇಜು ಕಟ್ಟಡವು ಶರವೇಗದಲ್ಲಿ ಸಾಗಿದೆ. ಅನೇಕ ಶಾಖಾ ಮಠಗಳನ್ನು ಜೀರ್ಣೋದ್ಧಾರಗೈದಿದ್ದಾರೆ. ಶ್ರೀ ಜಗದ್ಗುರುಗಳವರ ದೂರ ದೃಷ್ಟಿ ಮೆಚ್ಚುವಂತಹದು. ತಾವು ಸ್ಥಾಪಿಸಿದ ಸಂಸ್ಥೆಗಳು ಚೆನ್ನಾಗಿ ನಡೆಯಬೇಕೆಂಬ ಮಹೋದ್ದೇಶದಿಂದ ಅವೆಲ್ಲ ಸಂಸ್ಥೆಗಳಿಗೆ ಬೇರೆ ಬೇರೆ ಟ್ರಸ್ಟನ್ನು ರಚಿಸಿ, ಭಕ್ತರ ಸಹಕಾರದೊಂದಿಗೆ, ಸದಸ್ಯರನ್ನು ನಿಯಮಿಸಿ, ಅದಕ್ಕಾಗಿ ಪ್ರತ್ಯೇಕ ಆಸ್ತಿಯನ್ನು ಅದಕ್ಕೆ ನೀಡಿದ್ದಾರೆ. ಭವಿಷ್ಯದಲ್ಲಿಯೂ ಪ್ರಗತಿಯತ್ತ ಸಾಗಬೇಕೆಂಬುವ ಮನದಿಚ್ಛೆ ಅವರ ಸಮಾಜಾಭಿಮಾನ ಹಾಗೂ ಕಳಕಳಿಯು ಪ್ರಶಂಸಾರ್ಹನಾದುದು.

## ಜಪಾನದ ವಿಶ್ವಶಾಂತಿ ಸಮ್ಮೇಲನ

ಶ್ರೀಜಗದ್ಗುರುಗಳು ತಮ್ಮ ೧೭ ವರುಷಗಳ ಅವಧಿಯಲ್ಲಿ ಉನ್ನತ ಮಟ್ಟದ ನೂರಾರು ಸಮ್ಮೇಲನಗಳಲ್ಲಿ ಭಾಗವಹಿಸಿ, ಆಶೀರ್ವಾದ ನೀಡಿದ್ದಾರೆ. ಪ್ರತಿ ಸಮ್ಮೇಲನದಲ್ಲಿಯೂ ಅಸಂಖ್ಯ ಶ್ರೋತೃಗಳು ಕಿಕ್ಕಿರಿದು ಅವರ ವಾಣಿಯನ್ನು ಕೇಳಿದ್ದಾರೆ. ಆಕಾಶವಾಣಿಯವರ ಬೇಡಿಕೆಯನ್ನು ಮನ್ನಿಸಿ ಅದೆಷ್ಟೋ ಬಾರಿ ಬಾನುಲಿ ಭಾಷಣವನ್ನು ಕರುಣಿಸಿದ್ದಾರೆ. ಅವೆಲ್ಲವನ್ನೂ ಇವರ "ಆಶೀರ್ವಾಣಿ" ಗ್ರಂಥದಲ್ಲಿ ಕಾಣಬಹುದು. ಇವಲ್ಲದೆ ೪-೫ ವರ್ಷಗಳ ಹಿಂದೆ ದಿಲ್ಲಿಯಲ್ಲಿ ಜರುಗಿದ ಜಾಗತಿಕ ಶಾಂತಿ ಪರಿಷತ್ತಿನಲ್ಲಿ ಕನ್ನಡ ನಾಡನ್ನು ಪ್ರತಿನಿಧಿಸಿ, ವಿಚಾರ ಪರಿಪ್ಲುತವಾದ ಉಪನ್ಯಾಸವನ್ನು ಮಾಡಿದರು. ಜಗತ್ತಿನ ನಾನಾ ದೇಶಗಳ ಪ್ರತಿನಿಧಿಗಳು ಇವರ ಚಿಂತನ ಸಮೃದ್ಧಿಗೆ ತಲೆಬಾ

ಗಿದರು. ಡಾ|| ಹೋಮರ್ A. Jack ವಿಶ್ವಶಾಂತಿ ಸಮ್ಮೇಲನದ ಪ್ರಧಾನ ಕಾರ್ಯದರ್ಶಿ ಅವರು ಅಮೇರಿಕದಲ್ಲಿ ತಮ್ಮ "ವಿಶ್ವಧರ್ಮಗಳು ಮತ್ತು ವಿಶ್ವಶಾಂತಿ" (World Religion and World Peace) ಎಂಬ ಗ್ರಂಥದಲ್ಲಿ ಜಗದ್ಗುರುಗಳ ಉಪನ್ಯಾಸವನ್ನು ಅಚ್ಚು ಹಾಕಿಸಿ ಪ್ರಸಿದ್ಧಿಸಿದ್ದಾರೆ.

ದಿಲ್ಲಿಯ ವಿಶ್ವಶಾಂತಿ ಪರಿಷತ್ತಿನಲ್ಲಿ ಪೂಜ್ಯ ಜಗದ್ಗುರುಗಳ ಉಪನ್ಯಾಸದಿಂದ ಪ್ರಭಾವಿತರಾದ ಧುರೀಣರು ಇವರನ್ನು ಜಪಾನದ ವಿಶ್ವಶಾಂತಿ ಸಮ್ಮೇಲನಕ್ಕೆ ಆಮಂತ್ರಿಸಿದರು. ಇದೊಂದು ಜಗದ್ಗುರುಗಳ ಮಹೋಜ್ವಲ ಜಯ-ಭೇರಿಯಾಯ್ತು. ಇದು ಇವರ ವ್ಯಕ್ತಿ ಪ್ರತಿಷ್ಠೆಯ ದ್ಯೋತಕವಾಗಿಲ್ಲ. ಸಮಾಜದ, ದೇಶದ ಬಗ್ಗೆ ಇವರಿಗಿರುವ ಜೀವಂತ ಕಳಕಳಿಯ ಕಾರಂಜಿಯಾಯ್ತು. ಈ ಸಮ್ಮೇಲನದಲ್ಲಿ ಜಗದ್ಗುರುಗಳವರ ವ್ಯಾಖ್ಯಾನವನ್ನು ನಾಲ್ವತ್ತು ರಾಷ್ಟ್ರಗಳಿಂದ ಆಗಮಿಸಿದ ಮೂರುನೂರು ಪ್ರಚಂಡ ಪಂಡಿತರೂ, ಜಪಾನ ದೇಶದ ಪ್ರತಿಷ್ಠಿತರೂ ಕಟ್ಟಾಸಕ್ತಿಯಿಂದ ಆಲಿಸಿದರು. ಶ್ರೀ ಜಗದ್ಗುರುಗಳ ಈ ಉಪನ್ಯಾಸದ ಮಹತ್ವದ ಸೂಚನೆಯೆಂದರೆ ಅವರು ಹತ್ತಂಶಗಳ ಸೂಚನೆಯೊಂದನ್ನು ಬಹಿರಂಗ ಸಭೆಯ (Plenary Session) ಮುಂದೆ ಆಲೋಚನೆಗೆ ಇಟ್ಟರು. ಅದರಲ್ಲಿ "ಜಾಗತಿಕ ಧರ್ಮ ಸಂಸ್ಥೆ."(World Parliament of Religions)ಯನ್ನು ಸ್ಥಾಪಿಸಬೇಕೆಂದೂ ಅದರಲ್ಲಿಎಲ್ಲ ಧರ್ಮಗಳಿಗೂ, ದೇಶಗಳಿಗೂ ಸಮಾನಾವಕಾಶವಿರಬೇಕೆಂದೂ, ತನ್ಮೂಲಕವಾಗಿ ವಿಶ್ವಶಾಂತಿ ಸ್ಥಾಪನೆಯನ್ನು ಬಿಗಿಕಟ್ಟಾಗಿ ಸ್ಥಾಪಿಸಬಹುದೆಂದೂ,ಹೇಳಿದರು.ಶಾಂತಿ ಪರಿಷತ್ತಿನ ಬಹುಸಂಖ್ಯಾತರಿಗೆ ಮಾನ್ಯವಾಯ್ತು. ಎಲ್ಲರೂ ತಮ್ಮ ಕರತಾಡನದಿಂದ ಈ ನೂತನ ಕ್ರಮವನ್ನು ಸ್ವಾಗತಿಸಿದರು. ಶ್ರೀಜಗದ್ಗುರುಗಳ ತಮ್ಮ ವಿಜಯಯಾತ್ರೆಯಲ್ಲಿ ಕಿಯೋಟೊ, ಟೋಕಿಯೋ, ನಾರಾ, ಟೀರಾ, ಟಿನ್ರಿಕ್ಯೋ ಹಾಂಗಕಾಂಗ್, ಜಕಾರ್ತಾ, ಸಿಂಗಾಪೂರ, ಕೌಲಾಲಂಪುರ, ಬ್ಯಾಂಕಾಕ್, ಮೊದಲಾದ ನಗರಗಳಿಗೆ ದರ್ಶನವಿತ್ತು, ವಿಶ್ವಶಾಂತಿ ಸಮ್ಮೇಲನದ ಫಲಶ್ರುತಿಯನ್ನು ತಿಳಿಸಿದರು. ಶ್ರೀಜಗದ್ಗುರುಗಳು ಪ್ರೊ. ಎ. ಎಲ್. ಹಿರೇಮಠರನ್ನು ತಮ್ಮ ಕಾರ್ಯದರ್ಶಿಯನ್ನು ಮಾಡಿಕೊಂಡು ತಮ್ಮೊಡನೆ ಕರೆದುಕೊಂಡು ಹೋಗಿದ್ದರು. ಶರಣ-ಸಂತರ ಅಮರವಾಣಿಯನ್ನು ವೀರಶೈವ

ಧರ್ಮದ ಗುರುಗಳಲ್ಲಿ, ಪ್ರಪ್ರಥಮವಾಗಿ ಸಾಗರದಾಚೆಗೆ, ಹೋಗಿ, ಬೀರಿ, ಭಾರತ ಸಂಸ್ಕೃತಿಯ ಅಭಿವ್ಯಕ್ತಿಯನ್ನು ತೋರಿ ಬಂದರು. ಇವರ ಈ ಯಾತ್ರೆ ಯಲ್ಲಿ ಅನೇಕ ಮಂತ್ರಿಗಳು, ಪ್ರತಿಷ್ಠಿತರೂ, ನಾನಾದೇಶಗಳ ಪತ್ರಿಕಾ ಕರ್ತರೂ ಇವರಿಂದ ಲಿಂಗ, ಭಸ್ಮಗಳನ್ನು ಪಡೆದುಕೊಂಡದ್ದು ನೋಡಿದರೆ, ಇವರ ಸಾಹಸಕ್ಕೆ ನಾವು ಮೆಚ್ಚಲೇಬೇಕು. ಅಲ್ಲಿ ಶರಣಧರ್ಮದ ತಿರುಳನ್ನು ಅರುಹಿ, ಶರಣತತ್ವದ, ಕಾಯಕವೇ ಕೈಲಾಸದ ಮಹಿಮೆಯನ್ನು ಅರುಹಿ ದ್ದಾರೆ. ಒಟ್ಟಿನಲ್ಲಿ ಜಗದ್ಗುರುಗಳು ಲಿ|| ಹಾನಗಲ್ಲ ಕುಮಾರಸ್ವಾಮಿಗಳ ತಮ್ಮ ಗುರುಗಳ ಆಶೆಯನ್ನು ಪೂರೈಸಿದರು. ಎಷ್ಟಾದರೂ ಇವರು ಮಹಾ ತ್ಮರ ವರದಾನದಿಂದ ಜನಿಸಿದ ವರಪುತ್ರರಲ್ಲವೆ?

ವಿದೇಶದಲ್ಲಿ ಜರುಗಲಿರುವ ವಿಶ್ವಶಾಂತಿ ಧರ್ಮ ಪರಿಷತ್ತಿಗೆ ಭಾಗವ ಹಿಸಲು ಕಳಕಳೀ ಪ್ರೋತ್ಸಾಹ ನೀಡಿದವರಲ್ಲಿ ಡಾ. ಆರ್. ಆರ್. ದಿವಾಕ ರರು, ಡಾ. ಹೋಮರ್ ಎ. ಜಾರ್ಕ ಹಾಗು ಭಕ್ತರು ಇವರೆಲ್ಲರು ಮುಖ್ಯರು.

೧೯೭೪ನೆಯ ಇಸ್ವಿಯಲ್ಲಿ ಮತ್ತೆ ಜಾಗತಿಕ ಧರ್ಮ ಶಾಂತಿ ಸಮ್ಮೇಲನ ದವರ ಆಮಂತ್ರಣದ ಮೇರೆಗೆ ಯುರೋಪ ಪ್ರವಾಸ ಕೈಕೊಂಡು, ಬೆಲ್ಜಿ ಯಂದಲ್ಲಿರುವ ಲುವೆನ್‌ದಲ್ಲಿ ಭಾರತೀಯ ಸಂಸ್ಕೃತಿ ಹಾಗೂ ಶರಣ ಧರ್ಮದ ಬಗ್ಗೆ ಭಾಷಣ ಮಾಡಿಬಂದರು. ಅಷ್ಟೇ ಅಲ್ಲದೆ ಆ ಸಂಸ್ಥೆಯ ಆರ್ಥಿಕವಿಭಾಗ ಗೌರವ ಸದಸ್ಯರಾಗಿ ಆರಿಸಲ್ಪಟ್ಟರು. ಹೀಗೆ ಅನೇಕ ಮುಖವಾಗಿ ಕಾರ್ಯ ಮಾಡುತ್ತಲಿದ್ದಾರೆ. ಮತ್ತೆ ೧೯೭೬ ರ ನವ್ಹಂಬರ ತಿಂಗಳಲ್ಲಿ, ಸಿಂಗಾಪುರದಲ್ಲಿ ಜರುಗಿದ ಏಷ್ಯಾ ರಾಷ್ಟ್ರಗಳ ಧರ್ಮ ಮತ್ತು ಶಾಂತಿ ಸಮ್ಮೇಲನದಲ್ಲಿ ಪ್ರತಿ ನಿಧಿಯಾಗಿ ಭಾಗವಹಿಸಲು ಒತ್ತಾಯ ಬಂದರೂ, ಈ ವರ್ಷ ಕರ್ನಾಟಕದಲ್ಲಿ ಬರಗಾಲಬವಣೆ ಮತ್ತೆ ಹಬ್ಬಿದ್ದರಿಂದ ಅದಕ್ಕಾಗಿ ಶ್ರಮವಹಿಸುವದಕ್ಕಾಗಿ ಬಿಟ್ಟರು. ಆದರೆ ತಮ್ಮ ಪ್ರತಿನಿಧಿಯನ್ನಾಗಿ ಶ್ರೀ ಅನಂತಪುರ ಮುರುಘಾ ಮಠದ ಮಲ್ಲಿಕಾರ್ಜುನ ದೇವರನ್ನು ಸಿಂಗಾಪುರಕ್ಕೆ ಕಳಿಸಿದ್ದರು. ಆ ಸಮ್ಮೇ ಲನದ ಸದಸ್ಯರಾಗಿ ಆರಿಸಲ್ಪಟ್ಟಿದ್ದಾರೆ,

ಮೂರುಸಾವಿರಮಠದ ಶ್ರೀ ಜಗದ್ಗುರುಗಳವರ ಬಹುಪ್ರತಿಭೆಗೆ ನಾವೆ ಲ್ಲರೂ ಮಣಿಯಲೇಬೇಕು.

ಅವರ ಬಹು ಪ್ರತಿಭೆಯ ಬಗ್ಗೆ ಶ್ರೀ ಎಂ. ಎಸ್. ಹೂಗಾರ M. A. ಈ ರೀತಿ ಬರೆದಿದ್ದಾರೆ:–

"ಲೋಕವೆಲ್ಲ ಲಿಂಗದೇವನ ಆಲಯವೆನ್ನುವ ಜಗದ್ಗುರುಗಳವರು ಮಾಧ್ವ ಬ್ರಾಹ್ಮಣ ಕೇಂದ್ರವಾದ ಉಡುಪಿಗೆ ದರ್ಶನ ನೀಡಿದ್ದಾರೆ. ಮಂತ್ರಾಲಯ ಕ್ಷೇತ್ರಕ್ಕೂ ದಯಮಾಡಿಸಿದ್ದಾರೆ. ಪಾಂಡಿಚೇರಿಯ ಮಾತೆಯವರನ್ನೂ ಸಂದರ್ಶಿಸಿ, ಒಂದು ಗಂಟೆ ಕಾಲ ಅವರೊಂದಿಗೆ ಸಮಾಲೋಚನೆಗೈದು-ಬಂದಿದ್ದಾರೆ. ಸಜ್ಜಲ ಗುಡ್ಡದ ಶರಣಮ್ಮನವರೆಂದರೆ ಇವರಿಗೆ ಅಪಾರ ವಿಶ್ವಾಸ ರಾಮಕೃಷ್ಣ ಮಿಶನ್‌ಗಳಿಗೆ, ಕ್ರಿಶ್ಚಿಯನ್ ಮಿಶನ್‌ಗಳಿಗೆ ಪ್ರತ್ಯಕ್ಷ ಭೆಟ್ಟಿಯಿತ್ತು ಆಯಾ ಧರ್ಮದವರು ಕೈಕೊಂಡಿರುವ ಮಿಶನ್ ಕೆಲಸಗಳನ್ನು ಆಸ್ಥೆಯಿಂದ ನಿರೀಕ್ಷಿಸಿದ್ದಾರೆ. ಪೂಜ್ಯ ಜಗದ್ಗುರುಗಳು ಗುಣಗ್ರಾಹಿಗಳು. ಒಳ್ಳೆಯದು ಎಲ್ಲಿಯೇ ಇರಲಿ. ಅದನ್ನು ಸ್ವೀಕರಿಸಿ, ಅದನ್ನು ಕಾರ್ಯರೂಪದಲ್ಲಿ ತರಲು ಪ್ರಯತ್ನಿಸುತ್ತಾರೆ. ತಿಬೇಟದ ಪೂಜ್ಯ ದಲಾಯಿಲಾಮಾ ಅವರನ್ನು ಕಂಡು, ತಮ್ಮ ಆತ್ಮೀಯತೆಯನ್ನು ಪ್ರಕಟಿಸಿದ್ದಾರೆ. ಯೋಗಾಸನದ ವಿವರನ್ನು ತಿಳಿಸಿದ್ದಾರೆ.

ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರನ್ನು ಕಂಡು, ಮಹಾತ್ಮಾ ಬಸವೇಶ್ವರರ "ಕಾಯಕವೇ ಕೈಲಾಸ"ದ ವಿಶಾಲ ತತ್ವದ ವಿಚಾರವನ್ನು ವಿವರಿಸಿದ್ದಾರೆ. ಗುರು ವಿರಕ್ತರ ಸಾಮರಸ್ಯಕ್ಕೆ ಬಹು ಪರಿಶ್ರಮಪಟ್ಟಿದ್ದಾರೆ.

ಅನೇಕ ಜನ್ಮಗಳ ಪುಣ್ಯ ವಿಶೇಷವೇ ಪ್ರತಿಭೆಯಾಗಿ ಮೈದಾಳಿ ಧರ್ಮ ಪೀಠಗಳ ಕುರಿತು ನಾಡಿನ ಸರ್ವತೋಮುಖ ಉನ್ನತಿಗಾಗಿ ನುಡಿದ ಅವರ ಆಶೀರ್ವಚನಗಳು ಜೇಡಗಿನ ಭಾಷೆಯಲ್ಲಿ ಹೊಸ ಹೊಸ ಅನುಭವಗಳನ್ನು ಅರಳಿಸಿವೆ. ಗುರುಮನೆಗಳನ್ನು ಸಂಸ್ಕೃತಿಯ ಸಿರಿಯನ್ನಾಗಿಸಿದ ಕೀರ್ತಿ ಅವರದು. ಅವರ ಮಹೋನ್ನತ ವ್ಯಕ್ತಿತ್ವ, ಅಂತರಂಗದ ಆಧ್ಯಾತ್ಮ ಚಿಂತನೆ, ಲೋಕದ ಲೇಸನ್ನು ಬಯಸುವ ಕಲ್ಯಾಣದೃಷ್ಟಿ ನಿಚ್ಚಳವಾಗಿ ಮೂಡಿವೆ ಅವರ ಕೃತಿಗಳಲ್ಲಿ.

ಶ್ರೀ ಜಗದ್ಗುರುಗಳ ವ್ಯಕ್ತಿತ್ವ ಯಾವದೇ ಒಂದು ಜಾತಿಯ ವಲಯಕ್ಕೆ ಸೀಮಿತವಾಗಿರುವಂತಹದಲ್ಲ. ಧರ್ಮದ ಹೆಸರಿನಲ್ಲಿ ನಿರ್ಮಿಸಿಕೊಂಡಿದ್ದ ತಾರತಮ್ಯದ ಅಡ್ಡಗೋಡೆಯನ್ನು ಒಡೆದು ಹಾಕಿ ಇಡೀ ಮಾನವತೆಯ ಉದ್ಧಾರದ ಕನಸನ್ನು ಕಂಡ ಮಹಾವ್ಯಕ್ತಿಗಳು ಅವರು.

ಶರವೇಗದಿಂದ ಶ್ರೀಜಗದ್ಗುರುಗಳು ಮಠದ ನಕ್ಷೆಯನ್ನು ಇಮ್ಮಡಿ, ಮುಮ್ಮಡಿ, ನೂರ್ಮಡಿ ಮಾಡಿ, ನಮ್ಮ ಮುಂದಿಟ್ಟು, ತಮ್ಮ ಸತ್ವಯುತ ವಾದ ಸಾಹಿತ್ಯದಿಂದ, ಅಮೃತ ಆಶೀರ್ವಾಣಿಯಿಂದ, ಸಮಾಜದಲ್ಲಿ ಒಂದು ಹೊಸ ಶಕ್ತಿ, ಉತ್ಸಾಹ ತುಂಬುತ್ತಿರುವರು. ಈ ಮಠದ ಇತಿಹಾಸದಲ್ಲಿಯೇ ಅವರದು ಸುವರ್ಣಕಾಲ ಅಂದರೆ ತಪ್ಪಾಗಲಾರದು.

ಓರ್ವ ಕಾರ್ಯದಕ್ಷತೆಯುಳ್ಳವರು, ಸಮಾಜ ಚಿಂತನೆ ಮಾಡುವ ಮಹಿಮಾನ್ವಿತರು ಹೇಗಿರುವರೆಂದು ಕೇಳಿದರೆ ಶ್ರೀಜಗದ್ಗುರುಗಳವರ ದರ್ಶನ ಹಾಗೂ ಅವರ ಕಾರ್ಯಗಳನ್ನು ನೋಡಿ ಬಾ ಎಂದು ಹೇಳಬಹುದು. ಅವರದು ದೈವೀಯ ಮಕರಂದ ಸೂಸುವ ವ್ಯಕ್ತಿತ್ವ.



## ಜಗದ್ಗುರು ಮಹಾಸನ್ನಿಧಿಯವರು ಹಮ್ಮಿಕೊಂಡಿರುವ ಮುಂದಿನ ಮಹತ್ವವಾದ ಯೋಜನೆಗಳು

ಕರ್ತೃ ಶ್ರೀಮಜ್ಜಗದ್ಗುರು ಗುರುಸಿದ್ಧೇಶ್ವರ ಲೀಲಾಮೃತವೆಂಬ ಕಾವ್ಯವನ್ನು ಸಂಸ್ಕೃತ, ಇಂಗ್ಲೀಷ, ಹಿಂದಿ, ಮರಾಠಿ, ತಮಿಳು, ತೆಲಗು ಮೊದಲಾದ ನಾನಾ ಬಾಷೆಗಳಲ್ಲ ಬರೆಸಿ, ಮುದ್ರಿಸಿ, ಪ್ರಕಾಶಗೈವುದು.

ಲಂಡನ್‌ದಲ್ಲಿ ಜಗದ್ಗುರು ಮೂರುಸಾವಿರಮಠದ ಶಾಖೆಗಳನ್ನು ಬಸವತತ್ವ ಪ್ರಚಾರಕ್ಕಾಗಿ ಸ್ಥಾಪಿಸುವುದು.

ದಿಲ್ಲಿ, ಮುಂಬಯಿ, ಕಾಶಿ, ಬೆಂಗಳೂರು ಈ ನಗರಗಳಲ್ಲಿ ಒಂದೊಂದು ಜಗದ್ಗುರು ಮೂರುಸಾವಿರಮಠದ ಶಾಖಾಮಠಗಳನ್ನು ಧರ್ಮಜಾಗೃತಿಗಾಗಿ ಸ್ಥಾಪಿಸುವುದು.

ಹುಬ್ಬಳ್ಳಿಯಲ್ಲಿ, ಜಗದ್ಗುರು ಮೂರುಸಾವಿರಮಠದ ಅರ್ಬನ್ ಬ್ಯಾಂಕ ಒಂದನ್ನು ಸ್ಥಾಪಿಸುವುದು.

ಹನ್ನೆರಡನೆಯ ಶತಮಾನದಲ್ಲಿ ಇದೇ ಮಠದ ವತಿಯಿಂದ ಮೂರು ಸಾವಿರ ವಿರಕ್ತರು ನಾಡಿನ ಹೊರನಾಡಿನ ನಾನಾ ಭಾಗಗಳಲ್ಲಿ ಸಂಚಾರ ಮಾಡಿ ಶರಣ ಧರ್ಮಪ್ರಚಾರ ಮಾಡಿದುದರ ಸ್ಮರಣಾರ್ಥವಾಗಿ ಮಠದ ವತಿಯಿಂದ ಭಾರತದ ನಾನಾಭಾಗಗಳಿಗೆ ಧರ್ಮ ಪ್ರಚಾರಕರನ್ನು ಕಳಿಸುವುದು.

ಈಗಾಗಲೇ ವಿದ್ವನ್ಮಣಿಗಳಿಂದ ತಯಾರಿಸಿದ ೬೦೦ ಶರಣ ಶರಣಿಯರ ಮಹಾಪುರುಷರ ಚರಿತಾತ್ಮಕ ಹಾಗು ಸಂಶೋಧನಾತ್ಮಕ ಪುಸ್ತಕಗಳನ್ನೂ ಪ್ರಕಟಿಸುವದು.

******

## ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು,

### ಶ್ರೀ ಮೂರುಸಾವಿರಮಠಕ್ಕೆ ಪಟ್ಟಾಭಿಷೇಕವಾದಂದಿನಿಂದ ೧೯೫೪ ರಿಂದ ೧೯೭೬ ರ ವರೆಗೆ ಸಾಧಿಸಿದ

## ಕಾರ್ಯರಂಗದ ಹಕ್ಕಿನೋಟ

೧) ಲಿಂಗೈಕ್ಯ ಶ್ರೀ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರಿಂದ ಕಟ್ಟಿಸಲ್ಪಟ್ಟ ಘಟಪ್ರಭೆಯ ಶ್ರೀಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆಯ ಕಾರ್ಯವನ್ನು ಪ್ರಾರಂಭಿಸಿದ್ದು.

೨) ಶ್ರೀ ಶಿವಯೋಗ ಮಂದಿರ ಸಂಸ್ಥೆಯ ಅಧ್ಯಕ್ಷರಾಗಿದ್ದು, ಹಾಗು ಅದರ ದ್ರುತಗತಿಯ ಪ್ರಗತಿ.

೩) ಹುಬ್ಬಳ್ಳಿ ಶ್ರೀಜಗದ್ಗುರು ಮೂರುಸಾವಿರಮಠದ ೪ ಲಕ್ಷ ರೂಪಾಯಿ ವೆಚ್ಚದಿಂದ ಜೀರ್ಣೋದ್ಧಾರ.

೪) ಶ್ರೀ ಮೂರುಸಾವಿರಮಠದ ಲಿಂಗರಾಜ ಪ್ರಸಾದ ನಿಲಯದ ಕಟ್ಟಡ ನಿರ್ಮಾಣ.

೫) ಅಸುಂಡಿ ಚನಮಲ್ಲಪ್ಪ ಕಲ್ಯಾಣಮಂಟಪದ ನಿರ್ಮಾಣ.
೬) ಅಕ್ಕಿ ಉಳವಪ್ಪ ವಿದ್ಯಾರ್ಥಿ ನಿಲಯದ ಕಟ್ಟಡ ನಿರ್ಮಾಣ.
೭) ಶ್ರೀಜಗದ್ಗುರು ಗುರುಸಿದ್ಧೇಶ್ವರ ಗ್ರಂಥಾಲಯದ ಕಟ್ಟಡ ನಿರ್ಮಾಣ.
೮) ಶ್ರೀಜಗದ್ಗುರು ಗುರುಸಿದ್ಧೇಶ್ವರ ಜನರಲ್‌ಹಾಸ್ಪೆಟಲ್‌ಕಟ್ಟಡ ನಿರ್ಮಾಣ.
೯) ಶ್ರೀಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳದ ಕಟ್ಟಡದ ನಿರ್ಮಾಣ.
೧೦) ೬೫ ಗ್ರಂಥಗಳ ಪ್ರಕಟನೆ.
೧೧) "ಪರಂಜ್ಯೋತಿ" (ಸಂಸ್ಕೃತಿ ಸೌರಭ ಸೂಸುವ ಮಾಸಿಕ) ಪ್ರಕಟಣೆ.
೧೨) "ಪರಂಜ್ಯೋತಿ" ಮುದ್ರಣಾಲಯದ ಸ್ಥಾಪನೆ.
೧೩) "ಪರಂಜ್ಯೋತಿ" ಕಾರ್ಯಾಲಯದ ಕಟ್ಟಡ ನಿರ್ಮಾಣ.
೧೪) ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಂಸ್ಥಾಪನೆ.
೧೫) ಶ್ರೀ ಕುಮಾರೇಶ್ವರ ವೈದಿಕ ಪಾಠಶಾಲೆಯ ಸ್ಥಾಪನೆ.
೧೬) ಶ್ರೀ ಕುಮಾರೇಶ್ವರ ವೈದಿಕ ಪಾಠಶಾಲೆಯ ಕಟ್ಟಡ ನಿರ್ಮಾಣ.
೧೭) ಜಗದ್ಗುರು ಗಂಗಾಧರ ಮಾಧ್ಯಮಿಕ ಶಾಲೆಯ ಕಟ್ಟಡ ನಿರ್ಮಾಣ.
೧೮) ಮೂರುಸಾವಿರಮಠದ ಗರ್ಲ್ಸಹಾಯ್‌ಸ್ಕೂಲದ ಪ್ರಾರಂಭ.
೧೯) ಗಂಡು ಮಕ್ಕಳ ಪ್ರಾಯಮರಿ ಸ್ಕೂಲಿನ ಕಟ್ಟಡ.
೨೦) ಹೆಣ್ಣುಮಕ್ಕಳ ಪ್ರಾಯಮರಿ ಸ್ಕೂಲಿನ ಕಟ್ಟಡ ನಿರ್ಮಾಣ.
೨೧) ಶಿವಾನುಭವ ಮಂಟಪದ ಸ್ಥಾಪನೆ.
೨೨) ಇಲಕಲ್ಲ ವಿಜಯ ಮಹಾಂತೇಶ್ವರ ವಿದ್ಯಾವರ್ಧಕ ಸಂಸ್ಥೆಯ ಸ್ಥಾಪನೆ
೨೩) ಇಲಕಲ್ಲ ಶ್ರೀ ವಿಜಯ ಮಹಾಂತೇಶ್ವರ ಆರ್ಟ್ಸ ಮತ್ತು ಸಾಯಿನ್ಸ ಕಾಲೇಜಿಗೆ ಸಂಪತ್ತಿ ದಾನ.
೨೪) ಶ್ರೀಜಗದ್ಗುರು ಮೂರುಸಾವಿರಮಠದ ವಿದ್ಯಾವರ್ಧಕ ಸಂಘದ ಸ್ಥಾಪನೆ.
೨೫) ಶ್ರೀಜಗದ್ಗುರು ಮೂರುಸಾವಿರಮಠದ ಮಹಿಳಾ ಕಾಲೇಜ ಪ್ರಾರಂಭ.
೨೬) ಇಲಕಲ್ಲ ವಿಜಯ ಮಹಾಂತೇಶ್ವರ ಗದ್ದುಗೆಯ ಜೋಡು ಗುಮ್ಮಟಗಳ ನಿರ್ಮಾಣ.
೨೭) ಚಿತ್ತರಗಿಯ ರಥಕ್ಕೆ ಸಂಪತ್ತಿ ದಾನ.

೨೮) ಧಾರವಾಡದ ಶ್ರೀ ಕುಮಾರೇಶ್ವರ ಆಯುರ್ವೇದ ದವಾಖಾನೆಗೆ ಭೂದಾನ.

೨೯) ಧಾರವಾಡ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಹೋಮಿಯೋಪಥಿ ದವಾಖಾನೆಗೆ ಭೂದಾನ.

೩೦) ಶಿವಯೋಗ ಮಂದಿರದಲ್ಲಿ ಅಖಿಲ ಭಾರತ ವೀರಶೈವ ಮಹಾಸಭೆಯ ೧೭ ನೆಯ ಅಧಿವೇಶನ ಗೈದದ್ದು.

೩೧) ಶಿವಯೋಗ ಮಂದಿರ ಸಂಸ್ಥೆಯ ಸುವರ್ಣಮಹೋತ್ಸವ ಆಚರಣೆಗಾಗಿ ಶ್ರಮವಹಿಸಿದ್ದು.

೩೨) ಕರ್ನಾಟಕದಲ್ಲಿರುವ ಹಾಗೂ ಕಾಶಿಯಲ್ಲಿರುವ ಜಾಣ ಹಾಗೂ ಬಡವರಾದ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿವೇತನ ನೀಡಿದ್ದು.

೩೩) ಪರರಾಷ್ಟ್ರಗಳಲ್ಲಿಯೂ ಉಚ್ಚವ್ಯಾಸಂಗಕ್ಕೆ ಹೋದ ಜಾಣ ವಿದ್ಯಾರ್ಥಿಗಳಿಗೆ ಧನಸಹಾಯ ನೀಡಿದ್ದು.

೩೪) ಯಾದವಾಡ ಮತ್ತು ಹುಕ್ಕೇರಿ ಹಾಯಸ್ಕೂಲುಗಳಿಗೆ ಧನಸಹಾಯ ಮಾಡಿದ್ದು.

೩೫) ಹುಬ್ಬಳ್ಳಿಯ ಮಹಿಳಾ ವಿದ್ಯಾಪೀಠಕ್ಕೆ ಧನಸಹಾಯ.

೩೬) ಹುಬ್ಬಳ್ಳಿಯ ಶ್ರೀ ವಿಜಯ ಮಹಾಂತೇಶ ಫಾಯಿನ್ ಆರ್ಟ್ಸ್ ಕಾಲೇಜಿಗೆ ಧನಸಹಾಯ ಮಾಡಿದ್ದು.

೩೭) ಶಿರಢಾಣದಲ್ಲಿ (ಹುಕ್ಕೇರಿ ತಾ.) ಶಾಖಾ ಮೂರುಸಾವಿರಮಠದ ನಿರ್ಮಾಣ.

೩೮) ಹುಬ್ಬಳ್ಳಿಯಲ್ಲಿ ಆರಂತಸ್ತಿನ ಮಹಾದ್ವಾರದ ನಿರ್ಮಾಣ ಮತ್ತು ಗೋಪುರ ಗಡಿಯಾರವನ್ನು ನಿಯೋಜಿಸಿದ್ದು.

೩೯) ಒಳಗಿನ ಮಹಾದ್ವಾರದ ನಿರ್ಮಾಣ.

೪೦) ಕುಮಾರೋದ್ಯಾನ ವನದ ರಚನೆ.

೪೧) ಇಂಗ್ಲೀಷ-ಹಿಂದಿಯಲ್ಲಿ ಸಾಹಿತ್ಯ ಧರ್ಮ-ಸಂಸ್ಕೃತಿಗಳ ಪ್ರಚಾರ.

೪೨) ದಿಲ್ಲಿಯಲ್ಲಿ "ಜಾಗತಿಕ ಸರ್ವಧರ್ಮಗಳ ಶಾಂತಿ ಪರಿಷತ್ತಿನಲ್ಲಿ ವಿಶ್ವ-ಶಾಂತಿ ಪರಿಷತ್ತಿ"ನಲ್ಲಿ ವಿಶ್ವಶಾಂತಿಗೆ ವೀರಶೈವಧರ್ಮದ ಕೊಡುಗೆ ಎಂಬ ವಿಷಯದ ಬಗ್ಗೆ ಹಿಂದಿಯಲ್ಲಿ ಭಾಷಣ ಮಾಡಿದ್ದು.

೪೩) ಜಪಾನದ ಕ್ಯೊಟೋದಲ್ಲಿ ಜಾಗತಿಕ ಸರ್ವಧರ್ಮಗಳ ಪರಿಷತ್ತಿನ ವತಿಯಿಂದ ಜಗತ್ತಿನ ೪೦ ರಾಷ್ಟ್ರಗಳ ಪ್ರಮುಖ ಪ್ರತಿನಿಧಿಗಳ ಬಹಿರಂಗ ಅಧಿವೇಶನದಲ್ಲಿ, ಭಾರತದ ಪ್ರತಿನಿಧಿಯಾಗಿ ಹಿಂದೂ-ಧರ್ಮ, ಹಾಗೂ ವೀರಶೈವ ಧರ್ಮದ ಶರಣ ತತ್ತ್ವದ ಕಾಯಕ ನಿಷ್ಠೆಯ ಬಗ್ಗೆ ಇಂಗ್ಲೀಷಿನಲ್ಲಿ ಭಾಷಣ ಮಾಡಿದ್ದು.

೪೪) ಕ್ಯೊಟೋ, ನಾರಾ, ಟೇರಾ-ಜಕಾಸಾ ಟೋಕಿಯೋಗಳಲ್ಲಿಶಿವಾನುಭವ ಕುರಿತು ಶಿವಶರಣರ ತತ್ತ್ವ ಕುರಿತು ಭಾಷಣ ಮಾಡಿದ್ದು.

೪೫) ಹಾಂಗಕಾಂಗ, ಜಕಾರ್ತಾ, ಸಿಂಗಾಪೂರ, ಕೌಲಾಲಂಪುರ, ಥಾಯ್ ಲ್ಯಾಂಡಗಳಲ್ಲಿ ಶಿವಾನುಭವ ಪ್ರಚಾರ ಹಾಗು ಪ್ರಮುಖ ವ್ಯಕ್ತಿಗಳಿಗೆ ಲಿಂಗಧಾರಣ.

೪೬) ಯುರೋಪ ಪ್ರವಾಸ ಬೆಲ್ಜಿಯಂದಲ್ಲಿರುವ ಲುವೆನ್‌ದಲ್ಲಿ ಜರುಗಿದ "ಜಾಗತಿಕ ಶಾಂತಿ ಸಮ್ಮೇಲನದಲ್ಲಿ ಭಾಗವಹಿಸಿದ್ದು, ಅಲ್ಲಿ ವಿಶ್ವ-ಶಾಂತಿಯ ಕುರಿತು ಚರ್ಚಿಸಿದ್ದು. ಅಲ್ಲಿಯ ಅನೇಕ ವಿದ್ವಾಂಸರ ಪ್ರಶ್ನೆಗಳಿಗೆ ಉತ್ತರಿಸಿದ್ದು.

೪೭) ಲುವೆನ್‌ದಲ್ಲಿ ಜಾಗತಿಕ ಶಾಂತಿ ಸಮ್ಮೇಲನದ ಫಾಯಿನಾನ್ಸ ಕಮಿಟಿಗೆ ಭಾರತ ವತಿಯಿಂದ ಮೆಂಬರಾಗಲು ಕೇಳಿದ್ದಕ್ಕೆ ಒಪ್ಪಿದ್ದು.

೪೮) ಲಂಡನ್-ಪ್ಯಾರಿಸ್ ಜರ್ಮನಿ, ಸ್ವಿಜರ್ಲಂಡ, ರೋಮ ಮುಂತಾದ ದೇಶಗಳಿಗೆ ಹೋಗಿ, ಅಲ್ಲಿಯ ರಾಯಭಾರಿಗಳ ಸತ್ಕಾರ ಸ್ವೀಕರಿಸಿ, ಭಾರತೀಯ ಸಂಸ್ಕೃತಿಯ ಬಗ್ಗೆ ಭಾಷಣ ಮಾಡಿದ್ದು. ಸ್ವೀಜರ್ಲಂಡ-ದಲ್ಲಿರುವ ಅರೋಜಾದಲ್ಲಿದ್ದ ಮಹರ್ಷಿ ಮಹೇಶಯೋಗಿಗಳ ಆಶ್ರಮಕ್ಕೆ ಭೆಟ್ಟಿಕೊಟ್ಟು, ಲಿಂಗ ತತ್ವದ ಬಗ್ಗೆ ಭಾಷಣ ಮಾಡಿದ್ದು.

೪೯) ಶಿವಯೋಗ ಮಂದಿರದಲ್ಲಿ ಧ್ಯಾನಧಾಮ ಕಟ್ಟಿಸಿದ್ದು.

೫೦) ಮೂರುಸಾವಿರಮಠದಲ್ಲಿ ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಪೂಜಾ ಸೇವಾಸಮಿತಿ ಸ್ಥಾಪಿಸಿದ್ದು, ಪೂಜೆಯನ್ನು ಕಾರ್ಯರೂಪದಲ್ಲಿ ತಂದದ್ದು

೫೧) ಜಗದ್ಗುರು ಗುರುಸಿದ್ಧೇಶ್ವರ ಕೀರ್ತನ ಮಹಾವಿದ್ಯಾಲಯದ ಸ್ಥಾಪನೆ ಕಾರ್ಯರೂಪದಲ್ಲಿ ತಂದದ್ದು.

೫೨) ಸಂಸ್ಕೃತಿ ಪ್ರಸಾರೋಪನ್ಯಾಸ ಮಾಲೆ ಪ್ರಾರಂಭ.

೫೩) ಮಹಿಳೆಯರಿಗಾಗಿ ಹಾಸ್ಟೆಲ್ ಕಟ್ಟಡ ನಿರ್ಮಾಣ.

೫೪) ಭೀಕರ ಬರಗಾಲ ಬಂದ ಪ್ರದೇಶಕ್ಕಾಗಿ ಹುಬ್ಬಳ್ಳಿ, ರಾಮದುರ್ಗ, ಗುಳೇದಗುಡ್ಡ ಮುಂತಾದ ಊರುಗಳಲ್ಲಿ ಪಾದಯಾತ್ರೆ ಮಾಡಿ, ಲಕ್ಷಾಂತರ ಧನ ಹಾಗೂ ಸಹಸ್ರಾರು ಚೀಲ ಧಾನ್ಯ ಸಂಗ್ರಹಿಸಿ, ನೂರಾರು ಗಂಜೀ ಕೇಂದ್ರಗಳನ್ನು ತೆರೆದು, ಕಷ್ಟ ನಿವಾರಣೆ ಮಾಡಿದ್ದು

೫೫) ಶ್ರೀಜಗದ್ಗುರುಗಳು ಸ್ವತಃ ಬರೆದ ಗ್ರಂಥಗಳು ೨೦ ಅಚ್ಚಾದವು ಗಳು ೧೫.

೫೬) ಧಾರವಾಡ ಶಾಖಾ ಮೂರುಸಾವಿರಮಠದ ಆವರಣದಲ್ಲಿ ಬಸವ ಮಂಗಲ ಭವನ ನಿರ್ಮಾಣ.

೫೭) ಧಾರವಾಡ ಶಾಖಾ ಮೂರುಸಾವಿರಮಠದ ಜೀರ್ಣೋದ್ಧಾರ.

೫೮) ಹಾವೇರಿಹುಕ್ಕೇರಿಮಠದ ಲಿಂಗೈಕ್ಯ ಶಿವಬಸವಸ್ವಾಮಿಗಳ ಗದ್ದುಗೆಯ ನಿರ್ಮಾಣಕ್ಕೆ ಧನಸಹಾಯ.

೫೯) ಹುಬ್ಬಳ್ಳಿಯ ಅಕ್ಕಿಹೊಂಡದ ಹೊಸಮಠವನ್ನು ಕಟ್ಟುವಾಗ ಧನ ಸಹಾಯ ಮಾಡಿದ್ದು.

೬೦) ಗದುಗಿನ ಕುಮಾರೇಶ್ವರ ಸಂಗೀತ ಪಾಠಶಾಲೆಗೆ ಧನ ಸಹಾಯ

೬೧) ಹಾವೇರಿಯ ಕುಮಾರೇಶ್ವರ ವೈದಿಕ ಪಾಠ ಶಾಲೆಗೆ ಧನಸಹಾಯ ಮಾಡಿದ್ದು.

೬೨) ಕಲಾಕಾರರಿಗೆ, ಗ್ರಂಥಕರ್ತರಿಗೆ ಹಾಗೂ ಪತ್ರಿಕಾಕರ್ತರಿಗೆ ಸತ್ಕಾರ ಮಾಡಿ, ಗೌರವಧನ ನೀಡಿದ್ದು.

೬೩) ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಓದುತ್ತಿರುವ ವೀರಶೈವ ಫಿಲಾಸಫಿ ಯಲ್ಲಿ ಪ್ರಪ್ರಥಮ ಬಂದವರಿಗೆ ಸುವರ್ಣಪದಕ ನೀಡಲು ಖಾಯಂ ನಿಧಿ ಇಟ್ಟಿರುವದು.

೬೪) ಘಟಪ್ರಭಾ ಜೆ. ಜಿ. ಸಹಕಾರಿ ಆಸ್ಪತ್ರೆಯ ಆವರಣದಲ್ಲಿ ಕ್ಷಯರೋಗ ದಲ್ಲಿ ಬಳಲುವ ರೋಗಿಗಳಿಗೆ ಹೊಸದಾಗಿ ಪ್ರತ್ಯೇಕ T. B. ಹಾಸ್ಪಿ ಟಲ್ ಕಟ್ಟಡ ನಿರ್ಮಾಣ.

೬೫) ಇಳಕಲ್ಲ, ದುಧನಿ, ನಿಡಗುಂದಿ, ಕೊಣ್ಣೂರ, ಮರಡೀಮಠ, ಹೊಸ ಪೇಟೆ, ಗದಗ ತೋಂಟದಾರ್ಯಮಠ, ತೆಲಸಂಗ, ಕೆಳದಿ, ನೊರಟಗಿ ಹೊಸೂರು, ಹುಬ್ಬಳ್ಳಿಯಎರಡೆತ್ತಿನಮಠ,ಗುಲಬುರ್ಗಾ, ಅನಂತಪುರ

ಬಸವಕಲ್ಯಾಣ, ಹುಲಸೂರ, ತಿಪಟೂರ ಮುಂತಾದ ಮಠಗಳಿಗೆ ಸಾಧಕರನ್ನೀಡಿದ್ದು. ಮತ್ತು ಪಟ್ಟಾಭಿಷೇಕ ಮಾಡಿಸಿದ್ದು.

೬೬) ಪಾಂಡಿಚೇರಿಗೆ ಸಂದರ್ಶನ, ಮಾತೆಯವರೊಡನೆ ಸಂಭಾಷಣೆ.

೬೭) ಮಂತ್ರಾಲಯ, ಧರ್ಮಸ್ಥಳ, ಉಡುಪಿ, ಶ್ರೀಶೈಲ, ಶೃಂಗೇರಿ, ರಂಭಾಪುರಿ, ಕಾಶಿಯ ಜಂಗಮವಾಡಿಮಠ, ಕಲಕತ್ತಾ ರಾಮಕೃಷ್ಣ ಮಿಶನ್, ಸೊಲ್ಲಾಪುರದ ಮಾತೆ ರುದ್ರಮ್ಮನವರ ವೀರೇಶ್ವರಆಶ್ರಮ, ಮಾತೆ ಸಜ್ಜಲಗುಡ್ಡದ ಶರಣಮ್ಮನವರ ಆಶ್ರಮ, ಗಡಹಿಂಗ್ಲಜದ ಮಾತೆ ಶರಣಮ್ಮನವರ ಆಶ್ರಮ, ಎಡೆಯೂರು, ಸುತ್ತೂರು, ಚಿತ್ರದುರ್ಗ ಮುಂತಾದ ಮಠಗಳ ಕ್ಷೇತ್ರಗಳಿಗೆ ಸಂದರ್ಶನ ನೀಡಿ, ಭಾರತೀಯ ಸಂಸ್ಕೃತಿ ಹಾಗೂ ವೀರಶೈವ ಧರ್ಮದ ವೈಶಿಷ್ಟ್ಯವನ್ನು ಕುರಿತು ಭಾಷಣ ನೀಡಿದ್ದು.

೬೮) ಮೂರುಸಾವಿರಮಠದಲ್ಲಿ ಗೋಶಾಲೆ ನಿರ್ಮಾಣ.

೬೯) ಏಷ್ಯಾ ರಾಷ್ಟ್ರಗಳ ಧರ್ಮ ಹಾಗೂ ಶಾಂತಿ ಸಮ್ಮೇಲನದ ಗೌರವ ಸದಸ್ಯರಾಗಿದ್ದು.

೭೦) ಜಾಗತಿಕ ಶಾಂತಿ ಧರ್ಮ ಸಮ್ಮೇಲನದ ಶಾಖೆ ಭಾರತದ ಕಮೀಟಿಯಲ್ಲಿ ಗೌರವ ಸದಸ್ಯರಾಗಿದ್ದು.

೭೧) ಮೂರುಸಾವಿರಮಠದ ಶಾಖೆಯಾದ ತಿಪಟೂರ ಷಡಕ್ಷರ ಮಠಕ್ಕೆ ಧನ ಸಹಾಯ ಮಾಡಿದ್ದು.

೭೨) ತಮಿಳು ನಾಡಿನಲ್ಲಿರುವ ಕುಂಭಕೋಣ ಮಠಕ್ಕೆ ಧನಸಹಾಯ ಮಾಡಿದ್ದು

೭೩) ಹುನಗುಂದ ತಾಲೂಕಿನ ಸೂಳಿಭಾವಿಯ ವಿಜಯಮಹಾಂತೇಶ್ವರ ಮಠದ ಕಟ್ಟಡ ನಿರ್ಮಾಣಕ್ಕೆ ಧನಸಹಾಯ ಮಾಡಿದ್ದು.

೭೪) ಬದಾಮಿ ತಾಲೂಕಿನ ಬೆಳವಲಕೊಪ್ಪ, ತಿಮ್ಮಾಪುರದಲ್ಲಿ ಸ್ಥಾಪನೆಯಾದ ಶಾಖಾ ಮೂರುಸಾವಿರಮಠಕ್ಕೆ ಧನಸಹಾಯ ಮಾಡಿದ್ದು.

೭೫) ಹುಬ್ಬಳ್ಳಿಯ ವೀರಶೈವ ಸಂಘಟನಾ ಸಮಿತಿ ರಚಿಸಲು ಸಲಹೆ ನೀಡಿದ್ದು

೭೬) ಬಡ ಕುಟುಂಬಗಳ ಲಗ್ನ ಸಮಾರಂಭಕ್ಕೆ ಧನಸಹಾಯ ಮಾಡಿದ್ದು. ಮಠದಲ್ಲಿ ಲಗ್ನ ಮಾಡಿಸಿದ್ದು.

೭೭) ಮೂರುಸಾವಿರಮಠದಲ್ಲಿ ರಾಷ್ಟ್ರಮಟ್ಟದಲ್ಲಿ ಸರ್ವಧರ್ಮ ಸಮ್ಮೇಲನ ಹಾಗೂ ೧೦೧ ಮಂಟಪ ಪೂಜೆಯನ್ನು ನೆರವೇರಿಸಿದ್ದು.

೭೮) ಧರ್ಮ ಛತ್ರದ ಕಟ್ಟಡ ನಿರ್ಮಾಣ.

೭೯) ಗೆಸ್ಟಹೌಸ್ ಕಟ್ಟಡ ನಿರ್ಮಾಣ.

೮೦) ಚಿತ್ರದುರ್ಗ, ಗದಗ, ಸಿರಿಗೆರೆ, ಸುತ್ತೂರು, ಸಿದ್ಧಗಂಗಾ, ಉಡುಪಿ ಪೇಜಾವರಮಠ ಶ್ರವಣಬೆಳಗೊಳ, ಅಣುವ್ರತ ಜೈನಮುನಿಗಳು ಚಿನ್ಮಯಾನಂದರು, ಮುಂತಾದ ಪೀಠಾಧೀಶರು ಹಾಗು ಸಂತರನ್ನು ಬರ ಮಾಡಿಕೊಂಡು, ಸಂಸ್ಥೆಯ ಕಾರ್ಯಚಟುವಟಿಕೆಗಳನ್ನು ತೋರಿಸಿ, ಅವರಿಂದ ತತ್ವಾನುಸಂಧಾನದ ಬಗ್ಗೆ ಭಾಷಣ ಮಾಡಿಸಿದ್ದು.

೮೧) ರಾಷ್ಟ್ರಪತಿಗಳು, ಉಪರಾಷ್ಟ್ರಪತಿಗಳು, ರಾಜ್ಯಪಾಲರು, ವಿನೋಬಾಭಾವೆ ಮುಖ್ಯ ಮಂತ್ರಿಗಳು, ಕರ್ನಾಟಕ ಆಂಧ್ರಮಹಾರಾಷ್ಟ್ರ ಹಾಗೂ ಉತ್ತರದೇಶದ ವಿದ್ವನ್ಮಣಿಗಳು, ಕೇಂದ್ರ ಮಂತ್ರಿಗಳು, ರಾಜ್ಯಮಂತ್ರಿಗಳು, ಮೂರುಸಾವಿರಮಠಕ್ಕೆ ಮುಂತಾದವರನ್ನು ಬರ ಮಾಡಿಕೊಂಡು, ಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ದರ್ಶನಾಶೀರ್ವಾದ ಮಾಡಿಸಿದ್ದು, ಭಾರತದ ಎಲ್ಲ ಮಹಾನಗರಗಳ ಮೇಯರ (ಮಹಾಪೌರರ) ಸತ್ಕಾರವನ್ನು ಮಠದಲ್ಲಿ ಮಾಡಿದ್ದು.

೮೨) ಆದರಗುಂಚಿಯ ಶಾಖಾ ಮೂರುಸಾವಿರಮಠದ ಕಟ್ಟಡ ನಿರ್ಮಾಣ.

೮೩) ಶಿರಬಡಿಗಿ ಪ್ರಾಥಮಿಕ ಶಾಲೆಯ ಕಟ್ಟಡಕ್ಕೆ ಧನಸಹಾಯ ಮಾಡಿದ್ದು.

೮೪) ಮೂರುಸಾವಿರಮಠದಲ್ಲಿ ಪ್ರತಿವರ್ಷ ಮಹಾತ್ಮಾಬಸವೇಶ್ವರ ಜಯಂತಿ, ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳ ಪುಣ್ಯತಿಥಿ ಆಚರಿಸಲು ಪ್ರಾರಂಭಿಸಿದ್ದು.

೮೫) ಲಿಂಗವಿಲ್ಲದ ೭೦,೦೦ ಜನರಿಗೆ ಲಿಂಗವನ್ನು ಧರ್ಮಾರ್ಥ ಕಟ್ಟಿಸಿದ್ದು. ಲಿಂಗದೀಕ್ಷೆಯಾಗಬೇಕೆನ್ನುವ ಅನ್ಯಮತೀಯರಿಗೂ ಲಿಂಗದೀಕ್ಷೆ ಮಾಡಿಸಿದ್ದು. ಇದೇ ತೆರನಾಗಿ ವಿವಾಹಾದಿ ಕಾರ್ಯಗಳನ್ನು ಮಾಡಿಸಿದ್ದು.

೮೬) ೪೦ ರಾಷ್ಟ್ರಗಳ ಪ್ರಮುಖರ, ಧರ್ಮಧುರೀಣರು ಸಂಘಟಿಸಿದ ಜಾಗತಿಕ ಧರ್ಮ ಮತ್ತು ಶಾಂತಿ ಸಮ್ಮೇಲವದ ಪ್ರಧಾನ ಕಾರ್ಯದರ್ಶಿ, ನ್ಯೂಯಾರ್ಕದಲ್ಲಿದ್ದ ಡಾ. ಹೋಮರ್, ಎ. ಜಾಕ್ ದಂಪತಿಗಳನ್ನು ಶ್ರೀ ಮೂರುಸಾವಿರಮಠದಲ್ಲಿ ಸತ್ಕರಿಸಿದ್ದು.

೮೭) ಸಂಶೋಧಕರ ಅನುಕೂಲಕ್ಕಾಗಿ ಜಗತ್ತಿನ ಎಲ್ಲ ಭಾಷೆಗಲ್ಲಿ ವೀರಶೈವ ಧರ್ಮಪರವಾಗಿ ಪ್ರಕಟವಾದ ಎಲ್ಲ ಗ್ರಂಥಗಳನ್ನು ಸಂಗ್ರಹಿಸಲು ನಿರ್ಧಾರ ಮಾಡಿ, ಕಾರ್ಯ ಪ್ರಾರಂಭಿಸಿದ್ದು.

೮೮) ಮೂರುಸಾವಿರಮಠದ ಪ್ರಸಾದನಿಲಯ ಹಾಗು ವಿದ್ಯಾರ್ಥಿನಿಲಯದಲ್ಲಿ ಎಲ್ಲ ಧರ್ಮದ ಬಡವಿದ್ಯಾರ್ಥಿಗಳಿಗೆ ಪ್ರವೇಶ ನಿಡಿದ್ದು.

೮೯) ಲಿಂ,ಜಗದ್ಗುರು ಗುರುಸಿದ್ಧೇಶ್ವರ ರಾಜಯೋಗೀಂದ್ರರ ಗದ್ದುಗೆಯ ಮಂಟಪ ನಿರ್ಮಾಣ.

೯೦) ಮೂರುಸಾವಿರಮಠದ ಕೇಂದ್ರ ಆಫೀಸ ಕಟ್ಟಡ ನಿರ್ಮಾಣ.

೯೧) ಪೂರ್ವಜರಾದ ಅನೇಕ ಲಿಂ.ಜಗದ್ಗುರುಗಳವರ ಸಾಲು ಗದ್ದುಗೆಗಳ್ಳುಳ್ಳ ಸಮಾಧಿ ಮಂಟಪ ನಿರ್ಮಾಣ.

೯೨) ಭಾರತ ಕೇಂದ್ರ ಸರಕಾರ (ರಾಷ್ಟ್ರೀಯ ರಕ್ಷಣಾ ನಿಧಿ ಸಮಿತಿ)ಗೆ ಧನ ಸಹಾಯ ಮಾಡಿದ್ದು.

೯೩) ಬಡ ವಿದ್ಯಾರ್ಥಿ ನಿಧಿಗೆ ಧನ ಸಹಾಯ ಮಾಡಿದ್ದು.

೯೪) ಬಸವ ಸಮಿತಿ ಬೆಂಗಳೂರು, ಧನ ಸಹಾಯ ಮಾಡಿದ್ದು.

೯೫) ಮುಂಬಯಿಯ ಬಸವ ಭವನ ನಿರ್ಮಾಣ ಸಮಿತಿಗೆ ಧನ ಸಹಾಯ ಮಾಡಿದ್ದು.

೯೬) ಕುಸುಗಲ್ಲಿನ ಕನ್ನಡ ಗಂಡು ಮಕ್ಕಳ ಪ್ರಾಥಮಿಕ ಶಾಲೆಯ ಕಟ್ಟಡಕ್ಕೆ ಧನ ಸಹಾಯ ಮಾಡಿದ್ದು.

೯೭) ಅನೇಕ ಸಹಕಾರಿ ಸಂಘ-ಸಂಸ್ಥೆಗಳಿಗೆ ಧನ ಸಹಾಯ ಮಾಡಿದ್ದು. ಹಾಗೂ ಭಕ್ತರಿಂದ ಧನ ಸಂಗ್ರಹ ಮಾಡಿದ್ದು.

೯೮) ವಾಲ್ಮೀಕಿ ಹಾಗುಭೋವಿ ಸಮಾಜದವರಿಗೆ ಧನಸಹಾಯ ಮಾಡಿದ್ದು.

೯೯) ಧಾರ್ಮಿಕ ವಿಷಯಗಳನ್ನೊಳಗೊಂಡ ಚಿಕ್ಕ ಚಿಕ್ಕ ಸಂಸ್ಕೃತ ಪುಸ್ತಕಗಳನ್ನು ಪ್ರಕಟಿಸಿ,ಪ್ರತ್ಯೇಕವಾಗಿ ಸಂಸ್ಕೃತ ಪ್ರಾಥಮಿಕ ಪರೀಕ್ಷೆಗಳನ್ನು ಏರ್ಪಡಿಸಿ ಅದರ ಕೇಂದ್ರಗಳನ್ನು ಧಾರವಾಡ, ವಿಜಾಪೂರ ಜಿಲ್ಹೆಗಳಲ್ಲಿ ತೆರೆದು, ಈ ಪರೀಕ್ಷೆಗಳನ್ನು ನಡೆಸಿದ್ದು.

೧೦೦) ಮಹಾತ್ಮಾ ಬಸವಣ್ಣನವರ ಚರಿತ್ರೆಗೆ ಸಂಬಧಿಸಿದ "ಕರ್ತಾರನ ಕಮ್ಮಟ"ವೆಂಬ ಬೃಹದ್ ಗ್ರಂಥವನ್ನು ಇಂಗ್ಲೀಷಿನಲ್ಲಿ ಅನುವಾದ ಮಾಡಿಸುತ್ತಿರುವದು.

೧೦೧) ಮಹಿಳಾ ಕಾಲೇಜ ಕಟ್ಟಡ ನಿರ್ಮಾಣ.

೧೦೨) ಧಾರವಾಡ, ಬೆಂಗಳೂರು, ಭದ್ರಾವತಿ ಮುಂತಾದ ಆಕಾಶವಾಣಿ ಕೇಂದ್ರಗಳಲ್ಲಿ ನೀತಿ ಮತ್ತು ಧರ್ಮ ಪರಭಾಷಣಗಳನ್ನು ಮಾಡಿದ್ದು.

೧೦೩) ಚಿತ್ತರಗಿ ದವಾಖಾನೆಗೆ ಧನ ಸಹಾಯ.

೧೦೪) ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜ ಕಟ್ಟಡ ನಿರ್ಮಾಣ

೧೦೫) ನ್ಯಾಶನಲ್ ಹಾಯ-ಸ್ಕೂಲ ಕಟ್ಟಡಕ್ಕೆ ಧನಸಹಾಯ.

೧೦೬) ಶ್ರೀ ಜಗದ್ಗುರು ಗಂಗಾಧರ ಹಾಯ-ಸ್ಕೂಲ, ಹುಬ್ಬಳ್ಳಿ ಹಾಗು ಇಲಕಲ್ಲಿನ ವಿಜಯ ಮಹಾಂತೇಶ್ವರ ಆರ್ಟ್ಸ, ಆ್ಯಂಡ್ ಸಾಯಿನ್ಸ ಕಾಲೇಜದಿಂದ ಉತ್ತಮ ತರಗತಿಯಲ್ಲಿ ಪ್ರತಿ ವರ್ಷ ಪಾಸಾದ ವಿದ್ಯಾರ್ಥಿಗಳಿಗೆ ಪಾರಿತೋಷಕ ನೀಡಲು ಧನ ಸಹಾಯ ಮಾಡಿದ್ದು.



## ಹುಬ್ಬಳ್ಳಿಯ ಜಗದ್ಗುರು ಮೂರುಸಾವಿರಮಠದಿಂದ ಸಹಾಯ ಪಡೆದ ಸಂಘ ಸಂಸ್ಥೆಗಳು

೧) ಲಿಂಗಾಯತ ವಿದ್ಯಾವರ್ಧಕ ನಿಧಿ, ಧಾರವಾಡ.

೨) ಕರ್ನಾಟಕ ಲಿಬರಲ್, ಎಜ್ಯುಕೇಷನ್ ಸೊಸೈಟಿ

೩) ಶ್ರೀ ಮದ್ವೀರಶೈವ ಶಿವಯೋಗ ಮಂದಿರ.

೪) ಗೋರಕ್ಷಣ ಸಂಸ್ಥೆ.

೫) ಜಗದ್ಗುರು ಗುರುಸಿದ್ಧೇಶ್ವರ ವಿದ್ಯಾರ್ಥಿ ನಿಲಯ, ಬೆಳಗಾಂವಿ.

೬) ಗಡಹಿಂಗ್ಲಜ ಹೈಸ್ಕೂಲ, ಗಡಹಿಂಗ್ಲಜ್.

೭) ಅನಾಥ ಬಾಲಕಾಶ್ರಮ, ಹುಬ್ಬಳ್ಳಿ.

೮) ಶ್ರೀ ಜಗದ್ಗುರು ಗಂಗಾಧರ ವಾಣಿಜ್ಯ ಮಹಾವಿದ್ಯಾಲಯ, ಹುಬ್ಬಳ್ಳಿ.

೯) ಶ್ರೀ ಜಗದ್ಗುರು ಗುರುಶಿದ್ಧೇಶ್ವರ ಪ್ರಾಥಮಿಕ ಶಿಕ್ಷಕರ ಪ್ರಶಿಕ್ಷಣ ಮಹಾವಿಧ್ಯಾಲಯ, ಹುಬ್ಬಳ್ಳಿ.

೧೦) ಶ್ರೀ ಕಾಡಸಿದ್ಧೇಶ್ವರ ಕಲಾ ಮಹಾವಿದ್ಯಾಲಯ, ಹುಬ್ಬಳ್ಳಿ.

೧೧) ವಿಜಯಮಹಾಂತ ಪ್ರೌಢ ಶಾಲೆ, ಹುನಗುಂದ.
೧೨) ಶ್ರೀ ಜಗದ್ಗುರು ಗಂಗಾಧರ ಗಾಂಧಿ ಸ್ಮಾರಕ ನೇತ್ರ ಚಿಕಿತ್ಸಾ ಪ್ರಶಿಕ್ಷಣ ಕೇಂದ್ರ, ಹುಬಳ್ಳಿ.
೧೩) ಕೈ. ಶ್ರೀ ಶಿವಲಿಂಗಪ್ಪಾ ಬಸವನಾಳ ಸ್ಮಾರಕನಿಧಿ ಸಮಿತಿ,ಹುಬ್ಬಳ್ಳಿ.
೧೪) ಅಕ್ಕನ ಬಳಗ, ಹುಬ್ಬಳ್ಳಿ.
೧೫) ಮಹಿಳಾ ವಿದ್ಯಾಪೀಠ, ಹುಬ್ಬಳ್ಳಿ
೧೬) ಶ್ರೀ ಕುಮಾರೇಶ್ವರ ವೈದಿಕ ಪಾಠಶಾಲೆ, ಹಾವೇರಿ.
೧೭) ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಂಗೀತ ಸಾಹಿತ್ಯ ಮಹಾ ವಿದ್ಯಾಲಯ, ಗದಗ.
೧೮) ಶ್ರೀ ಕಾಡಸಿದ್ಧೇಶ್ವರ ಪ್ರೌಢಶಾಲೆ, ಹುಕ್ಕೇರಿ.
೧೯) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಆಯುರ್ವೇದ ಚಿಕಿತ್ಸಾಲಯ ಧಾರವಾಡ.
೨೦) ಶ್ರೀ ಕುಮಾರೇಶ್ವರ ಉಚಿತ ಆಯುರ್ವೇದ ಚಿಕಿತ್ಸಾಲಯ,ಧಾರವಾಡ.
೨೧) ಶ್ರೀ ವಿಜಯ ಮಹಾಂತೇಶ ಕಲಾ ಮತ್ತು ವಿಜ್ಞಾನ ಮಹಾವಿದ್ಯಾ ಲಯ ಇಲಕಲ್ಲ.
೨೨) ವಿಜಯ ಮಹಾಂತೇಶ ಲಲಿತ ಕಲಾ ಮಹಾವಿದ್ಯಾಲಯ, ಹುಬ್ಬಳ್ಳಿ.
೨೩) ಕನ್ನಡ ಗಂಡು ಮಕ್ಕಳ ಪ್ರಾಥಮಿಕ ಶಾಲೆ, ಮಲ್ಲಾಪುರ.
೨೪) ಕನ್ನಡ ಗಂಡು ಮಕ್ಕಳ ಪ್ರಾಥಮಿಕ ಶಾಲೆ,ಕುಸುಗಲ್ಲ.
೨೫) ಭಾರತ ಕೇಂದ್ರ ಸರಕಾರ [ರಾಷ್ಟ್ರೀಯ ರಕ್ಷಣಾನಿಧಿ]
೨೬) ಕರ್ನಾಟಕ ರಾಜ್ಯಸರಕಾರ[ವಿದ್ಯಾಶಾಖೆ ಬಡ ವಿದ್ಯಾರ್ಥಿ ನಿಧಿ ಸಮಿತಿ.]
೨೭) "ಬಸವ ಭವನ" ನಿರ್ಮಾಣ ಸಮಿತಿ, ಮುಂಬಯಿ.
೨೮) ಬಸವ ಸಮಿತಿ, ಬೆಂಗಳೂರು.
೨೯) ಹೆಣ್ಣುಮಕ್ಕಳ ಪ್ರಾಥಮಿಕ ಶಾಲೆ,ಹುಬ್ಬಳ್ಳಿ.
೩೦) ಗಂಡು ಮಕ್ಕಳ ಪ್ರಾಥಮಿಕ ಶಾಲೆ, ಹುಬ್ಬಳ್ಳಿ.
೩೧) ಪ್ರಾಥಮಿಕ ಶಾಲೆ, ಶಿರಬಡಿಗೆ.
೩೨) ಹಾಗೂ ಕರ್ನಾಟಕದ ಹಲವು ಮಠಗಳ ಜೀರ್ಣೋದ್ಧಾರಕ್ಕಾಗಿ ಸಹಾಯ ನೀಡಿದೆ.

—

**ಇವುಗಳಲ್ಲದೆ ಶ್ರೀ ಮೂರುಸಾವಿರಮಠ ಹಾಗೂ ಶ್ರೀಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘದಿಂದ ನಡೆಯುತಕ್ಕ ಸಂಘ-ಸಂಸ್ಥೆಗಳು ಈ ಕೆಳಗಿನಂತಿವೆ.**

೧) ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜು.
೨) ಲಿಂಗರಾಜ ಪ್ರಸಾದ ನಿಲಯ.
೩) ಶ್ರೀ ಜಗದ್ಗುರು ಗಂಗಾಧರ ಹೈಸ್ಕೂಲು.
೪) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಗ್ರಂಥಾಲಯ.
೫) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಜನರಲ್ ಹಾಸ್ಟೆಲ್.
೬) ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ.
೭) ಅಕ್ಕಿ ಉಳವೆಪ್ಪಾ ವಿಧ್ಯಾರ್ಥಿ ನಿಲಯ.
೮) ಅಸುಂಡಿ ಚನಮಲ್ಲಪ್ಪಾ ಕಲ್ಯಾಣ ಮಂಟಪ.
೯) ಶ್ರೀ ಕಮಾರೇಶ್ವರ ಶಿವಯೋಗಿ ಸಂಘ.
೧೦) ಶ್ರೀ ಮೂರುಸಾವಿರಮಠ ಗರ್ಲ್ಸ್‌ಹೈಸ್ಕೂಲ.
೧೧) ಮಹಿಳಾ ಕಾಲೇಜ, ಹುಬ್ಬಳ್ಳಿ.
೧೨) ಕುಮಾರೇಶ್ವರ ವೈದಿಕ ಜ್ಯೋತಿಷ್ಯ ಪಾಠಶಾಲೆ, ಹುಬ್ಬಳ್ಳಿ.
೧೩) ವಿಮೆನ್ಸ್ ಹಾಸ್ಟೆಲ್
೧೪) ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಅತಿಥಿಗೃಹ.
೧೫) ಜಗದ್ಗುರು ಗುರುಸಿದ್ಧೇಶ್ವರ ಕೀರ್ತನ ಮಹಾವಿದ್ಯಾಲಯ.
೧೬) ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಪೂಜಾ ಸೇವಾಸಮಿತಿ.
೧೭) ಬಸವ ಮಂಗಲ ಭವನ, ಧಾರವಾಡ.
೧೮) ಸಂಸ್ಕೃತಿ ಪ್ರಚಾರೋಪನ್ಯಾಸ ಮಾಲೆ.
೧೯) ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ.
೨೦) "ಪರಂಜ್ಯೋತಿ" ಧಾರ್ಮಿಕ ಮಾಸಪತ್ರಿಕೆ.
೨೧) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆ, ಘಟಪ್ರಭಾ.

★★

ಶ್ರೀ ಜಗದ್ಗುರು ಮೂರುಸಾವಿರಮಠಕ್ಕೆ ಹಾಗು ಮೂರು ಸಾವಿರಮಠ ವಿಧ್ಯಾವರ್ಧಕ ಸಂಘದಿಂದ ನಡೆಯುವ ಮಹಿಳಾ ಕಾಲೇಜಿಗೆ ದಾನ ಸಲ್ಲಿಸಿದ ಮಹನೀಯರು.

ಜಗದ್ಗುರು ಮೂರುಸಾವಿರ ಮಠಕ್ಕೆ ಅನೇಕ ಮಹನೀಯರು ದಾನ ಮಾಡಿದ್ದಾರೆ. ಹಲವಾರು ಪ್ರಕಾರದ ದಾನಗಳನ್ನು ಮಾಡುತ್ತಾ ಬಂದಿರುವವರಲ್ಲಿ ಎಲ್ಲ ಜಾತಿಯ ಎಲ್ಲ ವರ್ಗದ ಜನಗಳೂ ಇರುತ್ತಾರೆ. ಇವರದಾನಗಳು ಧಾನ್ಯರೂಪವಾಗಿಯೂ ಭೂಮಿ,ಮನೆ, ನಗದು ಹಣ, ಕಟ್ಟಡಗಳನ್ನು ಕಟ್ಟಿಸಿಕೊಡುವದು ಮುಂತಾದ ರೀತಿಯಿಂದ ಕೊಡುತ್ತಾ ಬಂದಿರುತ್ತಾರೆ. ಸನ್ ೧೯೫೮ರಿಂದ ೧೯೭೬ರ ವರೆಗೆ ದಾನ ಕೊಟ್ಟವರ ಹೆಸರುಗಳನ್ನು ಕೆಳಗೆ ಸಾಧ್ಯವಾದ ಮಟ್ಟಿಗೆ ಕೊಡಲಾಗಿದೆ.

| ಅ.ಸಂ | ಮಹನೀಯರ ಹೆಸರುಗಳು |
|---|---|
| ೧) | ಶ್ರೀ ಜಗದ್ಗುರು ಗಂಗಾಧರ ಕಾಟನ್‌ಪ್ರೆಸ್ ಫ್ಯಾಕ್ಟರಿಯ ಪಾರ್ಟನರರು |
| ೨) | ಶ್ರೀ ಫಾರೆಸ್ಟ ಕಂಟ್ರಾಕ್ಟರ್ಸ ಟಿಂಬರ ಮರ್ಚಂಟ್ಸ ಅಸೋಸಿಏಶನ್ |
| ೩) | ಶ್ರೀ ಚಿಕ್ಕವೀರಯ್ಯನವರು ಚಿಕ್ಕವೀರಯ್ಯನವರಮಠ. |
| ೪) | ಶ್ರೀ ಚನಮಲ್ಲಪ್ಪನವರು ಅಸುಂಡಿ ಸಾ॥ ಬಿಡನಾಳ. |
| ೫) | ಶ್ರೀ ಡಾ॥ ತಮ್ಮಪ್ಪನವರು ಕೌಸಾಳಿ. |
| ೬) | ಶ್ರೀ ಸಂಗಪ್ಪನವರು ನಿಲುಗಲ್ಲ. |
| ೭) | ಶ್ರೀ ಶಿವರುದ್ರಪ್ಪನವರು. ಅಕ್ಕಿ |
| ೮) | ಶ್ರೀ ದೊಡ್ಡನಿಂಗಪ್ಪನವರು ಅಳಗುಂಡಗಿ. |
| ೯) | ಶ್ರೀ ಸಿದ್ದಪ್ಪನವರು ಬೆಂಡಿಗೇರಿ. |
| ೧೦) | ಶ್ರೀ ಗುರುಸಿದ್ದಪ್ಪನವರು ಬಾಳಣ್ಣನವರ (ಸುಳ್ಳದ) |
| ೧೧) | ಶ್ರೀ ವೀರಭದ್ರಪ್ಪನವರು ಬಾಳಣ್ಣನವರ (ಸುಳ್ಳದ) |
| ೧೨) | ಶ್ರೀ ರಾಮಣ್ಣನವರು ಜಾಧವ. |

೧೩) ಶ್ರೀ ಹನಮಂತಪ್ಪನವರು ಕನ್ಯಾಳ.
೧೪) ಶ್ರೀವಿರುಪಾಕ್ಷಪ್ಪನವರು ಹಿಪ್ಪರಗಿ.
೧೫) ಶ್ರೀ ಶಿವಪ್ಪನವರು ಜಿಗಳೂರ.
೧೬) ಶ್ರೀ ಬಸವಂತಪ್ಪನವರು ವಾಗವೋಡೆ.
೧೭) ಶ್ರೀ ಭೀಮಪ್ಪನವರು ಹಿರೂರ ಸಾ॥ ಬಿಡನಾಳ.
೧೮) ಶ್ರೀ ಹುಚ್ಚಪ್ಪನವರು ಲಕ್ಷ್ಮೇಶ್ವರ.
೧೯) ಶ್ರೀ ನಿಂಗಪ್ಪನವರು ಸಣ್ಣಕ್ಕಿ
೨೦) ಶ್ರೀ ಶಿವರುದ್ರಪ್ಪನವರು ಕಿನ್ನಾಳ
೨೧) ಶ್ರೀ ಬಸಪ್ಪನವರು ಕಿನ್ನಾಳ
೨೨) ಶ್ರೀ ಸಿದ್ದಲಿಂಗಪ್ಪನವರು ಕವಳಿ.
೨೩) ಶ್ರೀ ದಿವಂಗತ ಶ್ರೀ ನಾರಾಯಣಪ್ಪನವರು ಹೆಬಸೂರವರ ಮಕ್ಕಳು.
೨೪) ಶ್ರೀಯುತ ನೀಲಕಂಠಪ್ಪನವರು ಕಮ್ಮಾರ.
೨೫) ಶ್ರೀ ಎಸ್. ಎನ್, ಪಾಟೀಲ.
೨೬) ಶ್ರೀ ನಾಗಪ್ಪನವರು ಉದ್ದಿ.
೨೭) ಶ್ರೀ ವಿರುಪಾಕ್ಷಪ್ಪನವರು ಅಸುಂಡಿ ಸಾ॥ ಬಿಡನಾಳ.
೨೮) ಶ್ರೀ ಮಲ್ಲೇಶಪ್ಪನವರು ಅಸುಂಡಿ ಸಾ॥ ಬಿಡನಾಳ.
೨೯) ಶ್ರೀ ಶೇಖರಪ್ಪನವರು ಅಸುಂಡಿ. ಸಾ॥ ಬಿಡನಾಳ.
೩೦) ಶ್ರೀ ಎಸ್. ಬಿ. ಪಾವಟೆ.
೩೧) ಶ್ರೀ ಎನ್.ಟಿ. ಹಬೀಬ.
೩೨) ಶ್ರೀ ವ್ಹಿ.ಆರ್. ಕರವೀರಶೆಟ್ಟರ.
೩೩) ಶ್ರೀ ಶಹಾ ದೇವಜಿ ಕೆಶವಜಿ.
೩೪) ಶ್ರೀ ಎನ್. ಜಿ, ಬೆಂಡಿಗೇರಿ.
೩೫) ಶ್ರೀ ಎಂ. ಎ. ಗುಡ್ಡದಕೇರಿ.
೩೬) ಶ್ರೀ ಕೆ. ಎಚ್ ಕುಲಕರ್ಣಿ.
೩೭) ಶ್ರೀ ಆರ್. ಜಿ. ವಿಜಾಪುರ.
೩೮) ಶ್ರೀ ಟಿ. ಆರ್ ಪಾಟೀಲ.
೩೯) ಶ್ರೀ ಪ್ರಭಾತ ಸಾಮಿಲ್ಲ.

೪೦) ಶ್ರೀ ಪಿ. ಕೆ. ಪಟೀಲ ಮತ್ತು ಕಂಪನಿ.
೪೧) ಶ್ರೀ ಶಂಕರ ಟಿಂಬರ ಡಿಪೋ.
೪೨) ಶ್ರೀ ಎ. ಆರ್. ಕಾಟೀರ.
೪೩) ಶ್ರೀ ಲಕ್ಷ್ಮಿ ವಿಜಯ ಸಾಮಿಲ್ಲ.
೪೪) ಶ್ರೀ ಭುವನೇಶ್ವರಿ ಆರ್ಟ್ಸ್ ಪ್ರೊಡಕ್ಷನ್
೪೫) ಶ್ರೀ ಪಂತೋಜಿ ಆ್ಯಂಡ ಬ್ರದರ್ಸ.
೪೬) ಶ್ರೀ ಗಂಗಾಧರ ಸ್ವಾಮಿಜಿ ಮೂರುಸಾವಿರಮಠ ಪ್ರೆಸ್ಸಿಂಗ ಆ್ಯಂಡ್ ಟ್ರೆಡಿಂಗ ಕಂ. ಲಿ. ಹುಬ್ಬಳ್ಳಿ.
೪೭) ಶ್ರೀ ಷಡಕ್ಷರಯ್ಯನವರು ವಿರುಪಾಕ್ಷಯ್ಯನವರು ತೇಗೂರಮಠ ”
೪೮) ಶ್ರೀ ಯಲ್ಲಪ್ಪಾ ಬಸಪ್ಪಾ ಸಿಂದಗಿ. ”
೪೯) ಶ್ರೀ ಶಹಾ ನಾರಾಯಣಜಿ ಖಾನಜಿ.ಹುಬ್ಬಳ್ಳಿ. ”
೫೦) ಶ್ರೀ ಲವ್ಲಿ ಸ್ವೀಟಮಾರ್ಟ. ಹುಬ್ಬಳ್ಳಿ. ”
೫೧) ಶ್ರೀ ಎಂ. ಜಿ. ಜರತಾರಘರ. ಹುಬ್ಬಳ್ಳಿ. ”
೫೨) ಶ್ರೀ ಎನ್. ವಿ, ಶೀಬರಗಟ್ಟಿ. ”
೫೩) ಶ್ರೀ ಶಹಾ ದಾಮಜಿ ಜಾಧವಜಿ.
೫೪) ಶ್ರೀ ರಾಮರಾವ ದೇಸಾಯಿ.
೫೫) ಶ್ರೀ ಚೇರಮನ್ ದಿ. ಹುಬಳಿ ಕೋ-ಆಪ್ ಕಾಟನ್ ಸೇಲಸೊಸೈಟಿ ಹುಬ್ಬಳ್ಳಿ.
೫೬) ಶ್ರೀ ಜಿ. ಎಸ್. ಕಂಬಳಿ.
೫೭) ಶ್ರೀ ಬಸಲಿಂಗಪ್ಪಾ ಚನಬಸಪ್ಪಾ ಯಕಲಾಸಪೂರ
೫೮) ಶ್ರೀ ಎಸ್. ಎಸ್. ಖಜ್ಜಿ.
೫೯) ಶ್ರೀ ಎ. ಮಾನಪ್ಪಾ ಸನ್ಸ.
೬೦) ಶ್ರೀ ಸಿ. ಸಿ. ಯೆಮ್ಮೆಟ್ಟಿ ಹಿರೇಮಠ.
೬೧) ಶ್ರೀ. ವೀರನಗೌಡ ಗುರನಗೌಡ ಪಾಟೀಲ.
೬೨) ಶ್ರೀ ಗುರುಸಿದ್ಧಪ್ಪಾ ಬಸಟೆಪ್ಪಾ ಅಳಗುಂಡಗಿ.
೬೩) ಶ್ರೀ ಸಂಗಪ್ಪಾ ಮೂರುಸಾವಿರಪ್ಪಾ ಕೊರವಿ.
೬೪) ಶ್ರೀಮತಿ ಪಾರ್ವತೆಮ್ಮಾ ಕೋಂ, ಗುರುಸಿದ್ದಪ್ಪಾ ಸುಳ್ಳದ (ಬಾಳಣ್ಣವರ)

೬೫) ಶ್ರೀಮತಿ ಕಾಳಮ್ಮನವರು ಕೋಂ, ಯಚ್ಚರಪ್ಪನವರು ಕುಸಹಟ್ಟಿ.
೬೬) ಶ್ರೀಮತಿ ಗಂಗಮ್ಮನವರು ಬೆಂಗೇರಿ ಸಾ॥ ಕುಸುಗಲ್ಲ.
೬೭) ಶ್ರೀಮತಿ ಶಿವಕ್ಕನವರು ಉಣಕಲ್ಲ.
೬೮) ಶ್ರೀಮತಿ ಲಕ್ಷ್ಮೀಭಾಯಿ ಹೂಲಿ.ಹುಬ್ಬಳ್ಳಿ.
೬೯) ಶ್ರೀಮತಿ ಈರಮ್ಮನವರು ಬತ್ತಿ.
೭೦) ಶ್ರೀಮತಿ ಚನಬಸಮ್ಮನವರು ಬೆಂಡಿಗೇರಿ.
೭೧) ಶ್ರೀಮತಿ ಸಾವಂತ್ರೆವ್ವ ತೋರಾತ
೭೨) ಶ್ರೀಮತಿ ಈರವ್ವನವರು ಈಚಗೇರಿ
೭೩) ಶ್ರೀಮತಿ ಗಂಗಮ್ಮನವರು ಹಾಸಗಲ್ಲ
೭೪) ಶ್ರೀಯುತ ಬಸೆಟ್ಟೆಪ್ಪನವರು ಇಟಗಿ
೭೫) ಶ್ರೀ ಶಹಾ ಹಿರಾಚಂದ ಆನಂದಮಲ್ಲಜಿ
೭೬) ಶ್ರೀ ಹಾವಣಗಿ ಬಂಧುಗಳು
೭೭) ಶ್ರೀ ವೀರಭದ್ರಪ್ಪ ಅಘುಂಡಿ ಸಾ॥ ಬಿಡನಾಳ
೭೮) ಶ್ರೀ ಅಂಕಲಗಿ
೭೯) ಶ್ರೀ ಶಹಾ ನಾರಾಯಣಜಿ ಶಾಮಜಿ ಮೋತಾ
೮೦) ಶ್ರೀ ಪಾಠಕರು ರೂಪಂ ಟಾಕೀಜ
೮೧) ಶ್ರೀ ಕೂಡಲಮಠ ಅಜಂತಾ ಥೇಟರ
೮೨) ಶ್ರೀ ಎ. ಬಿ. ವಸಂತಕುಮಾರ ಬಿರೂರ
೮೩) ಶ್ರೀಮತಿ ಸಿದ್ಧಲಿಂಗಮ್ಮ ಕೋಂ. ಮುರಿಗೆಪ್ಪ ಸಾಂಗೋಲಿ
೮೪) ಮಲ್ಲಯ್ಯನವರು ಕೋಟಿಮನಿ ಹಳೇಹುಬ್ಬಳ್ಳಿ
೮೫) ಷಡಕ್ಷಯರಯ್ಯನವರು ತೇಗೂರಮಠ

ವಿಶೇಷ ಸೂಚನೆ:—ಕುಸುಗಲ್ಲ ಬಿಡನಾಳ ಕಾಟನಮಾರ್ಕೇಟ ಹಾಗೂ ಹುಬ್ಬಳ್ಳಿಯ ಹಲವು ಓಣಿಗಳ ಭಕ್ತರು ಧನಧಾನ್ಯರೂಪದಲ್ಲಿ ಸಹಾಯ ಸಲ್ಲಿಸುತ್ತ ಬಂದಿದ್ದಾರೆ.



## ಹುಬ್ಬಳ್ಳಿಯ ಶ್ರೀಜಗದ್ಗುರು ಮೂರುಸಾವಿರಮಠ
## —ಗ್ರಂಥಮಾಲೆಯಿಂದ ಪ್ರಕಟವಾದ ಗ್ರಂಥಗಳು—

೧) ವಿಶೇಷಾರ್ಥ--ಪ್ರಕಾಶಿಕಾ (ಸಂಸ್ಕೃತ) ( ಕನ್ನಡ ಅರ್ಥ ಸಹಿತ )
೨) ತಂತ್ರ ಸಂಗ್ರಹಃ　　"
೩) ಶಿವ-ಮಂತ್ರ-ಜಪ-ವಿಧಿಃ　　"
೪) ಗುರು
೫) ರಘುವಂಶ-ರಹಸ್ಯ　　( ಸರಳ ಕನ್ನಡ ಗದ್ಯ )
೬) ಬಸವ-ಸ್ತವನ-ಮಂಜರಿ
೭) ಸಿದ್ಧೇಶ್ವರ-ವಚನ
೮) ವೀರಶೈವಾನಂದ-ಚಂದ್ರಿಕಾ (ಸಂಸ್ಕೃತ)
೯) ಅಸ್ಪೃಶ್ಯತಾ–ನಿವಾರಣೆ　( ಗದ್ಯ-ಪದ್ಯಾತ್ಮಕ)
೧೦) ಶ್ರೀ ಕಾಡಸಿದ್ಧೇಶ್ವರ-ವಚನ
೧೧) ಹರೀಶ್ವರ ಪ್ರಶಸ್ತಿ
೧೨) The Lingayata Movement
೧೩) ಕನ್ನಡ ನೀತಿ-ಶತಕ
೧೪) ಬಸವ-ಜಯಂತಿ ತತ್ತ್ವ ಗುಚ್ಛ
೧೫) ಚಟ್ಟೀ ಮಾಮಲೇದಾರರ ಚರಿತ್ರೆ
೧೬) ಸಂಸ್ಕೃತ ಪ್ರವೇಶಃ (ಸಂಸ್ಕೃತ)
೧೭) ಸಂಸ್ಕೃತ ಪ್ರಕಾಶಃ
೧೮) ಕ್ಷೇತ್ರಜ್ಞ-ಸುಮನೋ-ವಾದಂ (ಕನ್ನಡ)
೧೯) ಶ್ರೀಮಜ್ಜಗದ್ಗುರು ಗುರುಸಿದ್ಧರಾಜೇಂದ್ರಮಹಾಸ್ವಾಮಿಗಳು ಮೂರುಸಾವಿರಮಠ, ಹುಬ್ಬಳ್ಳಿ ಅವರ ಸಂಕ್ಷಿಪ್ತ ಚರಿತ್ರೆ
೨೦) ಮಣಿ ವಚನಗಳು
೨೧) ಹೂವು ಹಣ್ಣು
೨೨) ವೀರಶೈವ ಸದಾಚಾರ ಸಂಗ್ರಹಃ (ಸಂಸ್ಕೃತ)
೨೩) ಶ್ರೀಮತ್ ಕುಮಾರ-ಗೀತಾ　( ,, )
೨೪) ಶಿವಾದ್ಯಷ್ಟಕ-ಸ್ತೋತ್ರ-ಮಣಿಮಾಲಾ

೨೫) ಚಿದಾನಂದ ಚಿಲುಮೆ- ಭಾಗ-೧
೨೯) ರುದ್ರಯ್ಯನವರು....ಗುಮ್ಮಗೋಳಮಠ ಅವರ ಚರಿತ್ರೆ
೨೭) ಲಿಂಗ-ಲೀಲಾ-ವಿಲಾಸ ಚರಿತ್ರೆ
೨೮) ವ್ಯಾಕರಣ-ದರ್ಪಣಃ ಪ್ರಥಮ ಭಾಗ (ಕನ್ನಡ)
೨೯) ಮರುಳಸಿದ್ಧೇಶ್ವರ-ನಾಮಾವಳಿ
೩೦) ವಚನ-ಶಾಸ್ತ್ರ-ರಹಸ್ಯವು
೩೧) ಹುಬ್ಬಳ್ಳಿ ಮೂರುಸಾವಿರಮಠದ ಮೂಲ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸುಪ್ರಭಾತ
೩೨) ಜೀವನ ವಿಕಾಸ
೩೩) ನಿಜಗುಣ ಶಿವಯೋಗಿ ಕೃತ-ವಿವೇಕ ಚಿಂತಾಮಣಿ
೩೪) ಅಮೃತ-ಬಿಂದು
೩೫) ಸಂಸ್ಕೃತಿ
೩೬) ಆಶೀರ್ವಾಣಿ, ಭಾಗ-೧
೩೭) ಶ್ರೀಗುರು ಕುಮಾರೇಶ್ವರ ಸುಪ್ರಭಾತಂ
೩೮) Shri Kumarashivayogi of Hanagal (A life-sketch)
೩೯) ಸ್ವತಂತ್ರ ಸಿದ್ಧಲಿಂಗೇಶ್ವರ ವಚನಗಳು
೪೦) ಸಂಸ್ಕೃತ ಮಾರ್ಗದರ್ಶಃ (ಸಂಸ್ಕೃತ)
೪೧) ನೀತಿ-ಸಂಗ್ರಹ
೪೨) ಹೊಂಗಿರಣ
೪೩) ವಿಜಯ ಮಹಾಂತೇಶ ಲಾವಣಿ
೪೪) ಅಪ್ಪಯ್ಯಸ್ವಾಮಿಗಳ ಜೀವನ-ಚರಿತ್ರೆ
೪೫) ಶ್ರೀ ಹಾನಗಲ್ಲ ಕುಮಾರೇಶ್ವರ-ಸುಪ್ರಭಾತ
೪೬) ಶ್ರೀಜಗದ್ಗುರು ಗುರುಸಿದ್ಧೇಶ್ವರ ಪುರಾಣ
೪೭) ಆನಂದ ಮಾಲಾ
೪೮) ವಿಶ್ವಾತ್ಮನಿಗೆ
೪೯) ಚೈತ್ಯ ಪಕ್ಷಿ

೫೦) ಚಿತ್‌ಪ್ರಭೆ
೫೧) ಸಂಗಮನಾಥನ ವಚನಗಳು
೫೨) ಪಥಿಕ
೫೩) ಮೊಗ್ಗೆಯ ಮಾಲೆ
೫೪) ಪೂಮಾಲೆ
೫೫) ಹುಬ್ಬಳ್ಳಿ ಮೂರುಸಾವಿರಮಠದ ಕರ್ತೃ ಶ್ರೀಜಗದ್ಗುರು ಗುರುಸಿದ್ಧೇಶ್ವರ ಅಷ್ಟೋತ್ತರ ಶತನಾಮಾವಳಿ
೫೬) ಚಿತ್ಸುಮನ
೫೭) ಶ್ರೀ ಶಿವಬಸವೇಶ್ವರ ಅಷ್ಟೋತ್ತರ ಶತನಾಮಾವಳಿ
೫೮) ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳ ಚರಿತ್ರೆ (ಹಿಂದೀ)
೫೯) ಶ್ರೀ ನಿ. ಪ್ರ. ಹಾನಗಲ್ಲ ಲಿಂ. ಶ್ರೀ ಕುಮಾರ ಮಹಾಶಿವಯೋಗಿನಾಂ ಜೀವನ ಚರಿತಮ್ (ಸಂಸ್ಕೃತ ಗದ್ಯ)
೬೦) Llght Supernal
೬೧) Heart's Blossoms (ಚಿತ್ಸುಮನ ಇಂಗ್ಲೀಷ ಅನುವಾದ)
೬೨) ಹುಬ್ಬಳ್ಳಿ ಮೂರುಸಾವಿರಮಠದ ಕರ್ತೃ ಶ್ರೀಜಗದ್ಗುರು ಗುರುಸಿದ್ಧೇಶ್ವರ ಭಕ್ತಿ-ಗೀತಗಳು, ಭಾಗ-೧
೬೩) ಯುಗಪುರುಷ ಯೋಗಿಕುಮಾರ
೬೪) ವಚನಕಾರ ಅಂಬಿಗರ ಚೌಡಯ್ಯ
೬೫) ವೀರಶೈವ ಸಂಸ್ಕೃತಿ
೬೬) ಕಾಯಕ-ಕ್ರಾಂತಿ
೬೭) ನಮನ
೬೮) ಲಿಂಗತತ್ತ್ವಪರಾಮರ್ಶೆ
೬೯) ಶರಣ ಸಂದೇಶ
೭೦) ಕಣ್ಣಿನ ಕ್ಯಾನ್ಸರ್
೭೧) ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಲೀಲಾಮೃತ
೭೨) ಜಗದ್ಗುರು ಗಂಗಾಧರ ರಾಜಯೋಗೀಂದ್ರರ ಚರಿತ್ರೆ
೭೩) ಬಸವಣ್ಣನವರ ಸಪ್ತ ಸೂತ್ರಗಳು

## ಅಚ್ಚಿಗೆ ಸಿದ್ಧವಾಗಿರುವ ಗ್ರಂಥಗಳು

೭೪) ಕರಡೀಶ ಚಂಪೂ,
೭೫) ಸಾಹಿತ್ಯ
೭೬) Religion and Peace
೭೭) ನಮ್ಮ ವಿದೇಶಯಾತ್ರೆ
೭೮) ರತ್ನಪಕ್ಷಿ
೭೯) ಚಿತ್‌ಕಿರಣ
೮೦) ಆಶೀರ್ವಾಣಿ (ಭಾಗ--೨)
೮೧) ಬಸವರಾಜ ಚಂಪೂ
೭೪) ಶರಣೆಯರ ಸೂಳ್ನುಡಿಗಳು
೭೫) ಕಾಯಕಯೋಗಿ ಶ್ರೀಗುರುಬಸವಾರ್ಯ ಮಠಪುರಾಸ್ತ್ರ
೭೬) ಶರಣ
೭೭) ಕುಮಾರವಾಣಿ
೭೮) ಗುರುಸಿದ್ಧೇಶ್ವರ ಲಾವಣಿ
೭೯) ಪರಮಪ್ರಸಾದಿ ಮರುಳಶಂಕರದೇವ
೮೦) ಶಿವಯೋಗ ಮಂದಿರ
೮೧) ಶರಣ ನುಲಿಯ ಚಂದಯ್ಯ
೮೨) ಗುರು
೮೩) ಕಾಶ್ಮೀರದ ಮಹಾಯೋಗಿನಿ ಲಲ್ಲೇಶ್ವರಿ



